ಡಾ|| ಎಂ.ಕೆ.ಸುದರ್ಶನ್. (ಜನನ ೧೯೫೫) ಬೆಂಗಳೂರಿನ ಕೆಂಪೇಗೌಡ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸ್‌ಸ್‌ನ ಕಮ್ಯೂನಿಟಿ ಮೆಡಿಸನ್ ವಿಭಾಗದ ಪ್ರಾಧ್ಯಾಪಕರೂ ಮುಖ್ಯಸ್ಥರೂ ಆದ ಡಾಕ್ಟರ್ ಎಂ.ಕೆ.ಸುದರ್ಶನ್ ಅವರು ಕರ್ನಾಟಕ ವಿಶ್ವವಿದ್ಯಾಲಯದ ಎಂ.ಬಿ.ಬಿ.ಎಸ್ ಪದವಿಯನ್ನೂ ವಾರಾಣಾಸಿಯ ಹಿಂದೂ ವಿಶ್ವವಿದ್ಯಾಲಯದ ಎಂ.ಡಿ.ಪದವಿಯನ್ನೂ ಪಡೆದಿದ್ದಾರೆ. ಭಾರತದ ಬೇರೆ ಬೇರೆ ರಾಜ್ಯಗಳಲ್ಲಿ ಮತ್ತು ಇಂಡೋನೇಷ್ಯ ಮತ್ತು ಸ್ವಿಟ್ಸರ್‌ಲೆಂಡ್ ದೇಶಗಳಲ್ಲಿ ಸಮ್ಮೇಳನಗಳಲ್ಲಿ ಭಾಗವಹಿಸಿದ್ದಾರೆ. ವೈದ್ಯವಿಜ್ಞಾನ ಕ್ಷೇತ್ರದಲ್ಲಿ ಸಂಶೋಧನೆ ಮಾಡಿ ಹಲವು ಪ್ರಬಂಧಗಳನ್ನು ಪ್ರಕಟಿಸಿದ್ದಾರೆ.

ಮೂಲಭೂತ ಶೈಕ್ಷಣಿಕ ಪುಸ್ತಕಮಾಲೆ

# ರೇಬೀಸ್

ಡಾ.ಎಂ.ಕೆ.ಸುದರ್ಶನ್

ಕರ್ನಾಟಕ ಸರ್ಕಾರ
**ಕನ್ನಡ ಪುಸ್ತಕ ಪ್ರಾಧಿಕಾರ**
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು-೫೬೦ ೦೧೮

Rabis: a study of the disease, its causes and treatment, by Dr.M.K.Sudarshan; published by Kannada Pustaka Pradhikara (Kannada Book Authority), Pampa Mahakavi Road, Chamarajpet, Bangalore-560 018.

PP: 104 Illustrations: 28



ಪ್ರಥಮ ಮುದ್ರಣ ೧೯೯೪

ಬೆಲೆ : ರೂ. ೧೪-೦೦






ಮುದ್ರಣ

ಮುದ್ರಕರು :
ಅಕ್ಷರೋಗ್ರಾಫಿಕ್ಸ್, ಬೆಂಗಳೂರು - 560 023
ದೂರವಾಣಿ : 3304131, 3382935

# ಮುನ್ನುಡಿ

ಕನ್ನಡ ಪುಸ್ತಕ ಪ್ರಾಧಿಕಾರವು ಬಹು ಸಂತೋಷದಿಂದ, ಮೂಲಭೂತ ಶೈಕ್ಷಣಿಕ ಪುಸ್ತಕ ಮಾಲೆಯ ಈ ಪ್ರಕಟಣೆಯನ್ನು ಕನ್ನಡಿಗರ ಕೈಗಳಲ್ಲಿ ಅದರಲ್ಲಿಯೂ ವಿದ್ಯಾರ್ಥಿ ವಿದ್ಯಾರ್ಥಿನಿಯರ ಕೈಗಳಲ್ಲಿ ಇರಿಸುತ್ತಿದೆ.

೧೯೯೧-೯೨ ರಲ್ಲಿ ಕರ್ನಾಟಕ ಸರ್ಕಾರವು ಈ ಯೋಜನೆಗೆ ಒಪ್ಪಿಗೆ ನೀಡಿದಾಗ "ಕನ್ನಡ ಮಾಧ್ಯಮದಲ್ಲಿ ಓದುತ್ತಿರುವ ಶಾಲಾ ಮತ್ತು ಕಾಲೇಜುಗಳ ವಿದ್ಯಾರ್ಥಿಗಳ ಪ್ರಯೋಜನಕ್ಕಾಗಿ ಭೌತಶಾಸ್ತ್ರ, ಸಮಾಜಶಾಸ್ತ್ರ, ಮಾನವಿಕಗಳು ಹಾಗೂ ಲಲಿತ ಕಲೆಗಳಿಗೆ ಸಂಬಂಧಿಸಿದ ಮೂಲಭೂತ (ಬೇಸಿಕ್) ಶೈಕ್ಷಣಿಕ ಪುಸ್ತಕಗಳ ಹಾಗೂ ಅವುಗಳ ಅನುವಾದಿತ ಆವೃತ್ತಿಗಳಿಗೆ ಉತ್ತೇಜನ ನೀಡಲು" ಈ ಯೋಜನೆಯನ್ನು ಕಾರ್ಯರೂಪಕ್ಕೆ ತರಲಾಗುವುದಾಗಿ ವಿವರಿಸಿತು. ಕರ್ನಾಟಕದ ವಿದ್ಯಾರ್ಥಿಗಳಿಗೆ ಅದರಲ್ಲಿಯೂ ಗ್ರಾಮಾಂತರ ಪ್ರದೇಶಗಳ ವಿದ್ಯಾರ್ಥಿಗಳಿಗೆ - ಕನ್ನಡದಲ್ಲಿ ಹೊಸ ವಿಷಯಗಳನ್ನು ತಿಳಿಯುವುದು ಸುಲಭ. ಅಲ್ಲದೆ, ಕನ್ನಡವು ವಿದ್ಯೆಯ ಎಲ್ಲ ಶಾಖೆಗಳ ಅಗತ್ಯಗಳನ್ನೂ ಪೂರೈಸಬಲ್ಲದು. ಅದರ ಸುಪ್ತ ಸಂಪನ್ಮೂಲಗಳನ್ನು ಬೆಳೆಸಬೇಕಾಗಿದೆ. ಇನ್ನೊಂದು ಮುಖ್ಯವಾದ ಅಂಶವನ್ನೂ ಗಮನಿಸಬೇಕು. ರಾಜ್ಯದ ವಿದ್ಯಾರ್ಥಿಗಳು ಅಧ್ಯಯನ ಮಾಡಬೇಕಾದ ವಿಷಯಗಳಿಗೆ ಸಂಬಂಧಿಸಿದಂತೆ ಕನ್ನಡದಲ್ಲಿ ವಿದ್ಯಾರ್ಥಿಗಳಿಗೂ ಅಧ್ಯಾಪಕರಿಗೂ ಪುಸ್ತಕಗಳು ಲಭ್ಯವಿರಬೇಕು. ಪಠ್ಯಪುಸ್ತಕಗಳು ಇರುತ್ತವೆ ನಿಜ. ಆದರೆ ಪಠ್ಯಪುಸ್ತಕಗಳಲ್ಲಿ ಸಂಗ್ರಹವಾಗಿ ನಿರೂಪಿಸಿರುವ ವಿಷಯಗಳ ಬಗ್ಗೆ ಇನ್ನಷ್ಟು ತಿಳಿದುಕೊಳ್ಳುವ ವಿದ್ಯಾರ್ಥಿಗೆ ಅಥವಾ ಸಂದರ್ಭ ಗ್ರಂಥವನ್ನು ಅಪೇಕ್ಷಿಸುವ ಅಧ್ಯಾಪಕರಿಗೆ ಕನ್ನಡದಲ್ಲಿ ನೆರವಾಗುವ ಪುಸ್ತಕಗಳು ದೊರೆಯಬೇಕು. ರಾಜ್ಯದ ಎಲ್ಲಾ ಭಾಗಗಳ ಎಲ್ಲ ವಿದ್ಯಾಸಂಸ್ಥೆಗಳ ವಿದ್ಯಾರ್ಥಿವಿದ್ಯಾರ್ಥಿನಿಯರಿಗೆ ಎಲ್ಲ ವಿಷಯಗಳಲ್ಲಿ ಒಂದೇ ಮಟ್ಟದ ಬೋಧನೆ ದೊರಕುತ್ತದೆ ಮತ್ತು ಎಲ್ಲ ವಿದ್ಯಾಸಂಸ್ಥೆಗಳಲ್ಲಿ ಒಂದೇ ಮಟ್ಟದ ಪುಸ್ತಕ ಭಂಡಾರಗಳ ಸೌಕರ್ಯ ಇರುತ್ತದೆ ಎಂದು ಹೇಳುವಂತಿಲ್ಲ. ಸ್ವಲ್ಪ ಮಟ್ಟಿಗಾದರೂ ಈ ಅಸಮಾನತೆಗಳನ್ನು ನಿವಾರಿಸುವ ಪ್ರಯತ್ನ 'ಮೂಲಭೂತ ಶೈಕ್ಷಣಿಕ ಪುಸ್ತಕ ಮಾಲೆ'.

ಈ ಮಾಲೆಯ ಪುಸ್ತಕಗಳು ಪಠ್ಯ ಪುಸ್ತಕಗಳಲ್ಲ, ಶಾಲಾ ಕಾಲೇಜುಗಳಲ್ಲಿ ಅಧ್ಯಯನಕ್ಕೆ ಗೊತ್ತುಮಾಡಿರುವ ಪಠ್ಯ ಕ್ರಮಕ್ಕೆ ಸಂಬಂಧಿಸಿದವು. ವಿದ್ಯಾರ್ಥಿಗಳು

ಅಧ್ಯಯನ ಮಾಡಬೇಕಾದ ಯಾವುದಾದರೊಂದು ವಿಷಯವನ್ನು ವಿಸ್ತಾರವಾಗಿ ಶಾಸ್ತ್ರೀಯ ಅಧ್ಯಯನಕ್ಕೆ ಸರಳವಾಗಿ ನಿರೂಪಿಸುವುದು ಈ ಮಾಲಿಕೆಯ ಪುಸ್ತಕಗಳ ಗುರಿ. ಆದಷ್ಟು ಸುಲಭ ಬೆಲೆಗೆ ಈ ಪುಸ್ತಕಗಳನ್ನು ಲಭ್ಯಮಾಡಬೇಕೆಂಬುದೂ ಕನ್ನಡ ಪುಸ್ತಕ ಪ್ರಾಧಿಕಾರದ ಅಪೇಕ್ಷೆ.

ಕನ್ನಡ ಮಗುವಿಗೆ ಕನ್ನಡದಲ್ಲಿ ಎಲ್ಲ ತಿಳುವಳಿಕೆಯೂ ಲಭ್ಯವಾಗಬೇಕು. ಈ ಘನವಾದ ಉದ್ದೇಶದ ಸಾಧನೆಗಾಗಿ ಕನ್ನಡ ಪುಸ್ತಕ ಪ್ರಾಧಿಕಾರವು ಶ್ರಮಿಸುತ್ತಿದೆ. ಸುಯೋಗದಿಂದ ನಾಡಿನ ವಿವಿಧ ಕ್ಷೇತ್ರಗಳ ತಜ್ಞರು ಪ್ರಾಧಿಕಾರಕ್ಕೆ ತುಂಬು ಹೃದಯದ ಸಹಕಾರವನ್ನು ನೀಡುತ್ತಿದ್ದಾರೆ. ಹಾಗೆಯೇ ಕಲಾವಿದರೂ ಮುದ್ರಣಾಲಯಗಳವರೂ ಸಹಕರಿಸುತ್ತಿದ್ದಾರೆ. ಈ ಕಾರ್ಯಶೀಲ ಸಹಕಾರದ ಒಂದು ಪ್ರತೀಕ ಈ ಪುಸ್ತಕ. 'ರೇಬೀಸ್' ಪುಸ್ತಕವನ್ನು ಡಾ. ಎಂ.ಕೆ. ಸುದರ್ಶನ ಅವರು ವಿಶ್ವಾಸದಿಂದ ಬರೆದುಕೊಟ್ಟಿದ್ದಾರೆ. ಅವರಿಗೆ ನಾವು ಕೃತಜ್ಞರು. ಸಮೃದ್ಧ ಆಫ್‌ಸೆಟ್ ಪ್ರಿಂಟರ್ಸ್‌ರವರು ಪುಸ್ತಕವನ್ನು ಸಕಾಲಕ್ಕೆ ಮುದ್ರಿಸಿಕೊಟ್ಟಿದ್ದಾರೆ. ಇವರಿಗೂ ಧನ್ಯವಾದಗಳು.

ಈ ಮಾಲೆಯ ನಿರ್ವಹಣೆಯ ಕಾರ್ಯದಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರದ ಮಾನ್ಯ ಸದಸ್ಯರೂ ಮೂಲಭೂತ ಶಿಕ್ಷಣ ಮಾಲೆಯ ಉಪಸಮಿತಿಯ ಮಾನ್ಯ ಸದಸ್ಯರೂ ನೀಡುತ್ತಿರುವ ಸಹಕಾರವನ್ನು ಸಂತೋಷದಿಂದ ಸ್ಮರಿಸುತ್ತೇನೆ.

ಸಮರ್ಪಣ ಭಾವದಿಂದ ಕನ್ನಡ ಪುಸ್ತಕ ಪ್ರಾಧಿಕಾರವು ಈ ಪುಸ್ತಕವನ್ನು ಕನ್ನಡಿಗರ ಕೈಗಳಲ್ಲಿರಿಸುತ್ತಿದೆ. ಸಹೃದಯ ಕನ್ನಡಿಗರ ಸಲಹೆಗಳಿಗೆ ಎಂದೂ ಸ್ವಾಗತವಿದೆ.

**ಎಲ್.ಎಸ್. ಶೇಷಗಿರಿ ರಾವ್**
ಅಧ್ಯಕ್ಷರು
**ಕನ್ನಡ ಪುಸ್ತಕ ಪ್ರಾಧಿಕಾರ.**

೧೯-೯-೯೪
ಬೆಂಗಳೂರು

# ಪರಿವಿಡಿ

# ೧ ಇತಿಹಾಸ

## ೧.೧ ಪ್ರಸ್ತಾವನೆ

ನಾಯಿಹುಚ್ಚು ಒಂದು ಭಯಾನಕವಾದ ಕಾಯಿಲೆ. ಇದನ್ನು ಆಂಗ್ಲಭಾಷೆಯಲ್ಲಿ ರೇಬೀಸ್ ಎಂದು ಕರೆಯುತ್ತಾರೆ. ಮನುಷ್ಯನಲ್ಲಿ ಈ ಕಾಯಿಲೆ ಬಂದಾಗ ಜಲಭಯ ಅಥವಾ ಹೈಡ್ರೋಫೋಬಿಯಾ ಎಂದು ಕರೆಯುತ್ತಾರೆ. ಇದೇ ಕಾಯಿಲೆಗೆ ಫ್ರೆಂಚ್ ಭಾಷೆಯಲ್ಲಿ "ಲಿಸ್ಸಾ" (Lyssa) ಎಂದು ಹೆಸರಿದೆ. ರೇಬೀಸ್ ಪದವು ಮೂಲತಃ ಸಂಸ್ಕೃತ ಪದವಾಗಿದ್ದು "ರಬಸ್" ಅಂದರೆ ತ್ವರಿತ, ಉಗ್ರ, ಅಥವ ರಭಸ ಎಂದು ಅರ್ಥನೀಡುವ ಪದದ ಮೂಲದಿಂದ ಬಂದಿದೆ.



ಚಿತ್ರ 1.1 ಉಗ್ರ ರೂಪದಲ್ಲಿ ಒಂದು ಹುಚ್ಚುನಾಯಿ
(ಮೂಲ : ಭಾರತೀಯ ಹೆಕ್ಸಟ್ ಸಂಸ್ಥೆ)

ಈ ಕಾಯಿಲೆಯು ಯಾವುದೇ ಬಿಸಿರಕ್ತದ ಪ್ರಾಣಿಗೆ ಬರಬಹುದು. ಮನುಷ್ಯನಿಗೆ ಸಾಮಾನ್ಯವಾಗಿ ಹುಚ್ಚು ಪ್ರಾಣಿಯಿಂದ ಅದರಲ್ಲೂ ನಮ್ಮ ದೇಶದಲ್ಲಿ ಹುಚ್ಚು ನಾಯಿಯ ಕಡಿತದಿಂದ ಬರುತ್ತದೆ. ಈ ಕಾಯಿಲೆ ಒಮ್ಮೆ ಮನುಷ್ಯರಲ್ಲಿ ಕಂಡುಬಂದರೆ ಗುಣಪಡಿಸಲು ವಿಶ್ವದಲ್ಲಿ ಇಂದಿಗೂ ಔಷಧವಿಲ್ಲ. ಅಂದರೆ ಇದು ವಸ್ತುತಃ ನೂರಕ್ಕೆ ನೂರರಷ್ಟು ಮರಣವನ್ನುಂಟು ಮಾಡುತ್ತದೆ. ಆದುದರಿಂದ ಜನರು ಈ ಕಾಯಿಲೆಯನ್ನು ಭೀತಿಯಿಂದ ಯಮನಂತೆ ಕಾಣುತ್ತಾರೆ. ಈ ಕಾಯಿಲೆಯ ಮುಲಕ್ಷಣವೆಂದರೆ ರೋಗಿ ನೀರು ಕಂಡೊಡನೆ ಭಯಪಡುತ್ತಾನೆ. ಹಾಗು ಒತ್ತಾಯಪೂರ್ವಕವಾಗಿ ನೀರು ಕುಡಿಸಲು ಹೋದರೆ ಗಂಟಲು ಬೇನೆ ಹಾಗು ಸೆಳೆತ ಬಂದು ಭೀತಿ ಹೊಂದುತ್ತಾನೆ. ಹಾಗು ಸಾಯುವವರೆವಿಗೂ ರೋಗಿಯು ಪ್ರಜ್ಞಾಸ್ಥಿತಿಯಲ್ಲಿದ್ದು ಅತ್ಯಂತ ಶೋಚನೀಯ ಹಾಗು ಹೃದಯ ನಿಷ್ಪ್ರಾವಕ ಪರಿಸ್ಥಿತಿಯಲ್ಲಿ ಸಾಯುತ್ತಾನೆ.

ಈ ಕಾಯಿಲೆಯು ಮೂಲತಃ ನಿವಾರಕ, ಅಂದರೆ ಇದು ಬಾರದಂತೆ ತಡೆಯಲು ಸಾಧ್ಯ. ಈ ಭಯಾನಕ ಮರಣಾಂತಕ ಕಾಯಿಲೆ ಬಗ್ಗೆ ಜನಸಾಮಾನ್ಯರು ಸೂಕ್ತ ಮಾಹಿತಿ, ವಿವರಗಳನ್ನು ತಿಳಿಯುವುದು ಅತಿ ಅವಶ್ಯಕ. ಈ ಕಾಯಿಲೆ ಬರದಂತೆ ಸೂಕ್ತ ರೀತಿಯಲ್ಲಿ ಪಾಲಿಸಬೇಕಾದ ಮುನ್ನೆಚ್ಚರಿಕೆ ಕ್ರಮಗಳು, ನಾಯಿ ಕಚ್ಚಿದ ನಂತರ ರೋಗನಿರೋಧಕ ಹಾಗು ಲಸಿಕಾ ಚಿಕಿತ್ಸಾ ವಿಷಯಗಳನ್ನು ತಿಳಿದು, ಪಾಲನೆ ಮಾಡುವುದು ಅತಿ ಮುಖ್ಯ.

## ೧.೨ ಇತಿಹಾಸ

ರೇಬೀಸ್ ಅತಿ ಪ್ರಾಚೀನ ಕಾಲದಿಂದಲೂ ಮಾನವನಿಗೆ ತಿಳಿದಿರುವ ಕಾಯಿಲೆ. ಪೂರ್ವ ದೇಶಗಳ ವೈದ್ಯರು ಕ್ರಿಸ್ತ ಪೂರ್ವ 3000 ವರ್ಷಗಳ ಹಿಂದೆಯೇ ಈ ಕಾಯಿಲೆಯನ್ನು ವಿವರಿಸಿರುವ ದಾಖಲೆಗಳು ಇವೆ. ಕೆರಳಿದ ನಾಯಿ, ಸುರಿಯುತ್ತಿರುವ ಜೊಲ್ಲು, ಬಾಗಿದ ಕಿವಿಗಳು. ಗೊರಗೊರ ಗಂಟಲ ಶಬ್ದ, ಮಡಚಿದ ಬಾಲ, ನೆಟ್ಟದೃಷ್ಟಿ ಈ ಎಲ್ಲ ಲಕ್ಷಣಗಳನ್ನು

ಹೊಂದಿದ ನಾಯಿಯು ಅಪಾಯಕಾರಿ ಎಂದು ಅಂತಹ ನಾಯಿಯನ್ನು ದೂರದಿಂದ ಬಾಣದಿಂದ ಕೊಲ್ಲಬೇಕೆಂದೂ ಶಿಲಾಸನದ ಮೇಲೆ ವಿವರಿಸಿದ ದಾಖಲೆಗಳಿವೆ.

ಪುರಾಣಗಳಲ್ಲಿ ರೇಬೀಸ್ ವಿವರಗಳನ್ನು ಮೊದಲು ಡಿಮೊಕ್ರಿಟಸ್. ಕ್ರಿಸ್ತ ಪೂರ್ವ 500ರಲ್ಲಿ ಅನಂತರ ಮೊದಲನೆಯ ಶತಮಾನದಲ್ಲಿ ಸೆಲ್ಸಸ್ ತಿಳಿಸಿದ್ದಾರೆ. ಈ ಕಾಯಿಲೆಯು ಮನುಷ್ಯನಿಗೆ ನಾಯಿ ಕಚ್ಚುವುದರಿಂದ ಬರುತ್ತದೆಯೆಂದು ಸ್ಪಷ್ಟವಾದ ವಿವರ ನೀಡಿ, ಅದರಲ್ಲೂ ನಾಯಿಯ ಜೊಲ್ಲಿನಲ್ಲಿರುವ ವಿಷವೇ ಕಾರಣವೆಂದು ಉಲ್ಲೇಖಿಸಿದ್ದಾರೆ.

ಆದರೆ ವೈಜ್ಞಾನಿಕವಾಗಿ ಈ ವಿಷವನ್ನು ಮೊದಲು ಪರಿಶೀಲಿಸಿ ಅವರು ತಿಳಿಸಿದ್ದೇನೆಂದರೆ ಈ ಕಾಯಿಲೆ ಹುಚ್ಚು ನಾಯಿಯ ಜೊಲ್ಲಿನಿಂದ ಬರುವುದು ಸತ್ಯ, ಆದರೆ ಈ ಜೊಲ್ಲಿನಲ್ಲಿರುವ ಜೀವಾಣು ಆಮ್ರದಲ್ಲಿ ವೃದ್ಧಿಯಾಗುವುದಿಲ್ಲ ಎಂದು; ಆಗಿನ್ನೂ ವೈರಸ್ ವಿಷಾಣುಗಳ ಬಗ್ಗೆ ತಿಳುವಳಿಕೆ ಇಲ್ಲದ್ದರಿಂದ ಅದನ್ನು ಹಾಗೆಯೇ ಒಪ್ಪಿಕೊಳ್ಳಲಾಯಿತು.

ಲೂಯಿ ಪಾಶ್ಚರ್ (1822-1895) ಫ್ರಾನ್ಸ್ ದೇಶದ ಒಬ್ಬ ಮಹಾನ್ ಮೇಧಾವಿ; ಅವರು ರೇಬೀಸ್ ಕುರಿತ ಪ್ರಯೋಗದಿಂದ ವಿಶ್ವ ವಿಖ್ಯಾತರಾಗಿದ್ದಾರೆ. ರೇಬೀಸ್ ಒಂದು ಅಂಟು ರೋಗ ಹಾಗು ಹುಚ್ಚು ನಾಯಿ ಕಚ್ಚುವುದರಿಂದ ಬರುತ್ತದೆ ಎನ್ನುವುದು ಜನರಿಗೆ ತಿಳಿದಿತ್ತು. ಆದರೆ ಪಾಶ್ಚರ್ ಒಂದು ಹುಚ್ಚು ನಾಯಿಯ ಜೊಲ್ಲನ್ನು ಸೂಕ್ಷ್ಮದರ್ಶಕದಲ್ಲಿ ಪರೀಕ್ಷಿಸಿದಾಗ ಅದರಲ್ಲಿ ಹೊಸದಾಗಿ ಯಾವ ಸೂಕ್ಷ್ಮಜೀವಿಗಳೂ ಅವರಿಗೆ ಕಾಣಲಿಲ್ಲ. ಅವರು ಆ ಜೊಲ್ಲನ್ನು ಆರೋಗ್ಯ ನಾಯಿಗಳಿಗೆ ಚುಚ್ಚಿದರು. ಕೆಲವು ನಾಯಿಗಳು ಮಾತ್ರ ರೇಬೀಸ್ ಕಾಯಿಲೆ ಬಂದು ಸತ್ತವು. ನಂತರ ಅವರು ರೇಬೀಸ್ ನರವ್ಯೂಹಕ್ಕೆ ಸಂಬಂಧಿಸಿದ ರೋಗವಾದುದರಿಂದ ಹುಚ್ಚುನಾಯಿಯ ಬೆನ್ನುಹುರಿ ಮತ್ತು ಮಿದುಳಿನಲ್ಲಿ ಸುಳಿವು ಸಿಗಬಹುದೆಂದು ಅವನ್ನು ಅರೆದು ಆರೋಗ್ಯವಂತ ನಾಯಿಗಳಿಗೆ ಚುಚ್ಚಿದರು. ಇದರಿಂದಲೂ ಕೆಲವು ನಾಯಿಗಳು ಸತ್ತವು. ಸ್ಪಷ್ಟವಾದ ಫಲಿತಾಂಶ ಇದರಿಂದಲೂ



**ಚಿತ್ರ 1.2 ಲೂಯಿ ಪ್ಯಾಶ್ಚರ್ (1822-1895)**

ದೊರೆಯಲಿಲ್ಲ. ಇದರಿಂದ ಪ್ಯಾಶ್ಚರ್‌ರವರು ಈ ಹೊಸ ರೋಗಾಣು ಅತಿ ಸೂಕ್ಷ್ಮ ಜೀವಿ ಎಂದು ಒಂದು ನಿರ್ಧಾರಕ್ಕೆ ಬಂದರು.

ಹುಚ್ಚು ನಾಯಿಯ ಜೊಲ್ಲನ್ನು ಆರೋಗ್ಯವಂತ ನಾಯಿಗಳಿಗೆ ಮಿದುಳಿನಲ್ಲಿ ಚುಚ್ಚಿದಾಗ ಅವು ಎರಡು ವಾರದ ನಂತರ ಸಾಯುತ್ತಿದ್ದವು. ಆದರೆ ಅದೇ ಜೊಲ್ಲನ್ನು ಮೊಲಗಳ ಮಿದುಳಿಗೆ ಚುಚ್ಚಿದಾಗ ಆರು ದಿನಗಳಲ್ಲೇ ಅವು ಸತ್ತವು. ನಂತರ ಪ್ಯಾಶ್ಚರ್‌ರವರು ತಮ್ಮ ಪ್ರಯೋಗಗಳಿಗೆ ನಾಯಿಯ ಬದಲು ಮೊಲಗಳನ್ನು ಉಪಯೋಗಿಸಿದರು. ರೇಬೀಸ್‌ನಿಂದ

ಸತ್ತ ಮೊಲದ ಬೆನ್ನು ಹುರಿಯನ್ನು ಗಾಳಿಯಲ್ಲಿ ಒಣಗಿಸಿದಷ್ಟು ಅದು ಹೆಚ್ಚು ಹೆಚ್ಚು ಸತ್ವಗುಂದುವುದನ್ನು ಗಮನಿಸಿದರು. ಹದಿನಾಲ್ಕು ದಿನ ಒಣಗಿಸಿದ ಬೆನ್ನುಹುರಿಯಲ್ಲಿನ ವೈರಸ್ ನಿರಪಾಯಕಾರಿ ಎಂಬುದನ್ನು ಅವರು ತಮ್ಮ ಪ್ರಯೋಗದಿಂದ ಖಚಿತಪಡಿಸಿಕೊಂಡರು. ಹದಿಮೂರು ದಿನ ಒಣಗಿಸಿದ ಬೆನ್ನುಹುರಿ ಅದಕ್ಕಿಂತ ಹೆಚ್ಚು ಸತ್ವಯುತವಾಗಿರುತ್ತದೆ. ಹನ್ನೆರಡು ದಿನ ಒಣಗಿಸಿದ ಬೆನ್ನುಹುರಿ ಹದಿಮೂರು ದಿನದಕ್ಕಿಂತ ಹೆಚ್ಚು ಸತ್ವಯುತವೆಂದು ಕಂಡುಕೊಂಡರು. ಹೀಗೆ ಇವರು ತಮ್ಮ ಪ್ರಯೋಗಶಾಲೆಯಲ್ಲಿ ತಮ್ಮದೇ ವಿಧಾನದಲ್ಲಿ ರೇಬೀಸ್ ನಂಜು ಸೋಂಕಿದ ಮೊಲದ ಬೆನ್ನುಹುರಿಯನ್ನು ಲವಣದ ನೀರಿನಲ್ಲಿ ಅರೆದು ಅದನ್ನು ಲಸಿಕೆ ರೂಪಕ್ಕೆ ತಂದರು. ಇದನ್ನು ಅವರು ಹುಚ್ಚುನಾಯಿಯಿಂದ ಕಚ್ಚಲ್ಪಟ್ಟ ಆರೋಗ್ಯವಂತ ನಾಯಿಗಳಲ್ಲಿ ಪರೀಕ್ಷಿಸಿ ಅದರ ಯಶಸ್ಸನ್ನು ಖಚಿತಪಡಿಸಿಕೊಂಡರು.

ನಂತರ ಈ ಅಪಕ್ವ ಲಸಿಕೆಯನ್ನು ಅವರು 1885ರ ಜುಲೈ 6ರಂದು ತಮ್ಮ ಪ್ರಯೋಗ ಶಾಲೆಯಲ್ಲಿ ಒಂಬತ್ತು ವರ್ಷದ ಬಾಲಕನ ಮೇಲೆ ಪ್ರಯೋಗಿಸಿದರು. ಈ ಬಾಲಕನ ಹೆಸರು ಜೋಸೆಫ್ ಮೀಸ್ಟರ್. ಈ ಬಾಲಕ ಒಬ್ಬ ಜರ್ಮನಿಯ ಕುರಿಕಾಯುವವ. ಇವನಿಗೆ ಹುಚ್ಚುನಾಯಿಯು ತೀವ್ರವಾಗಿ ಕಚ್ಚಿದ್ದು, ಮೈಯ ಮೇಲೆ 14 ಗಾಯಗಳಿದ್ದವು. ಈ ಹುಡುಗನ ಬಂಧುಗಳಿಗೆ ಹಾಗೂ ತಂದೆ ತಾಯಿಗಳಿಗೆ ಈ ಬಾಲಕ ಬದುಕುವನೆಂಬ ಭರವಸೆಯೇ ಇರಲಿಲ್ಲ. ಈ ಹುಡುಗನ ಕಡೆಯವರು ಹತಾಶರಾಗಿಯೇ ಪ್ಯಾಶ್ಚರ್‌ರ ಬಳಿಗೆ ಕರೆತಂದರು. ಪ್ಯಾಶ್ಚರ್‌ರವರು, ಈ ಹುಡುಗನ ಮೇಲೆ, ತಮ್ಮ ಹೊಸದಾದ ಲಸಿಕೆಯನ್ನು ಪ್ರಯೋಗಿಸಿ, ಪವಾಡವೆಂಬಂತೆ ಬದುಕಿಸಿದರು.

ಇದರಿಂದ ಪಾಶ್ಚರ್‌ರವರು ವಿಶ್ವ ವಿಖ್ಯಾತರಾದರು. ವಿಶ್ವದಲ್ಲೇ ಹುಚ್ಚುನಾಯಿ ಕಚ್ಚಿ ಲಸಿಕೆಯಿಂದ ಬದುಕುಳಿದ ಮೊದಲನೆಯ ರೋಗಿಯೆಂದು ದಾಖಲೆಗೆ ಸೇರಿದನು ಜೋಸೆಫ್ ಮೀಸ್ಟರ್.

ಇದೇ ಬಾಲಕನು ಮುಂದೆ ತನ್ನ ಜೀವ ಉಳಿಸಿದ ಸ್ವಾಮಿಗೆ ಕೃತಜ್ಞತೆಯಿಂದ ಪಾಶ್ಚರ್‌ರವರ ಪ್ರಯೋಗಶಾಲೆಯಲ್ಲಿ ಕಾವಲುಗಾರನಾಗಿ




ಚಿತ್ರ 1.3 ಲೂಯಿ ಪಾಶ್ಚರ್‌ರವರು (ಹಿನ್ನಲೆಯಲ್ಲಿ) ತಮ್ಮ ಲಸಿಕೆಯನ್ನು ಜೋಸೆಫ್ ಮೀಸ್ಟರನ ಮೇಲೆ ಪ್ರಯೋಗಿಸುತ್ತಿರುವುದು (ಮೂಲ: ಪಾಶ್ಚರ್ ಮಾರಿಯೋ ಸಂಸ್ಥೆ)

ಕೆಲಸಕ್ಕೆ ಸೇರಿಕೊಂಡನು. ಲೂಯಿಪಾಶ್ಚರ್‌ರವರು 1895ರಲ್ಲಿ ತಮ್ಮ 73ನೇ ವಯಸ್ಸಿನಲ್ಲಿ ನಿಧನಹೊಂದಿದರು. ನಂತರವೂ ತನ್ನ ಸ್ವಾಮಿಯ ಪ್ರಯೋಗಶಾಲೆಯಲ್ಲಿ ಕಾವಲುಗಾರನಾಗಿ ಜೋಸೆಫ್ ಕೆಲಸ ಮುಂದುವರೆಸಿದನು.

1940ರಲ್ಲಿ ಎರಡನೇ ಮಹಾಯುದ್ಧದಲ್ಲಿ ಫ್ರಾನ್ಸ್‌ದೇಶಕ್ಕೆ ನುಗ್ಗಿದ ನಾಝಿಗಳು ವಿಶ್ವವಿಖ್ಯಾತ ಪ್ಯಾಶ್ಚರ್‌ನ ಪ್ರಯೋಗಶಾಲೆಗೆ ನುಗ್ಗಲು ಯತ್ನಿಸಿದಾಗ ೬೪ವರ್ಷದ ಜೋಸೆಫ್ ಮೀಸ್ಟರ್ ಅವರನ್ನು ತಡೆಯಲು ಹೋಗಿ ತನ್ನ ಪ್ರಾಣವನ್ನೇ ಅರ್ಪಿಸಿದ.

ಈ ಹಿನ್ನೆಲೆಯಲ್ಲಿ ಪ್ಯಾಶ್ಚರ್‌ರ ರೇಬೀಸ್ ಲಸಿಕೆಯು ವಿಶ್ವ ವಿಖ್ಯಾತಿ ಪಡೆದು, ವಿಶ್ವಾದ್ಯಂತ ಪ್ಯಾಶ್ಚರ್ ಸಂಸ್ಥೆಗಳು ಸ್ಥಾಪನೆಗೊಂಡವು. ಭಾರತದಲ್ಲಿರುವ ಪ್ಯಾಶ್ಚರ್ ಸಂಸ್ಥೆಗಳು ಹಾಗೂ ಇತರ ರೇಬೀಸ್ ಲಸಿಕೆ ಸಂಸ್ಥೆಗಳ ಪಟ್ಟಿಯನ್ನು ಪುಸ್ತಕದ ಕೊನೆಯಲ್ಲಿ ಕಾಣಬಹುದು.

# ೨ ಕಾಯಿಲೆ

## ೨.೧ ರೇಬೀಸ್ ವೈರಸ್

ರೇಬೀಸ್ ವೈರಸ್ ಒಂದು ಸಣ್ಣ ವಿಷಾಣು. ಇದರ ಅಳತೆ 200x80 ನಾನೋ ಮೀಟರ್ (1ನಾನೋ ಮೀಟರ್ = 1/10,00,000 ಮಿಲಿಮೀಟರ್). ಇದು ಅತಿ ಸೂಕ್ಷ್ಮವಾದುದರಿಂದ ಇದನ್ನು ವೀಕ್ಷಿಸಲು ವಿದ್ಯುನ್ಮಾನ ಸೂಕ್ಷ್ಮದರ್ಶಕ (ಎಲೆಕ್ಟ್ರಾನ್ ಮೈಕ್ರೋಸ್ಕೋಪ್) ಬೇಕಾಗುತ್ತದೆ. ಇದು ಒಂದು ಬಂದೂಕಿನ, ಗುಂಡಿನಾಕಾರವನ್ನು ಹೋಲುತ್ತದೆ. ಇದರ ವೈಶಿಷ್ಟ್ಯವೇನೆಂದರೆ ಇದು ನರಗಳ ಸಾಮ್ಯ ಪಡೆದಿರುತ್ತದೆ. (ನ್ಯೂರೋಟ್ರೋಫಿಕ್) ಇದು ಚಳಿಯನ್ನು, ಒಣಹವೆಯನ್ನು, ತಡೆದುಕೊಳ್ಳಬಲ್ಲದು. ಕೊಳೆತ ಪ್ರಾಣಿಯಲ್ಲೂ ಜೀವಂತ ಇರಬಹುದು. ಆದರೆ ಸೂರ್ಯನ ತಾಪಕ್ಕೆ (ಬಿಸಿಲಿನಿಂದ), ಅಲ್ಕೋಹಾಲ್ (70%



ಚಿತ್ರ 2.1 ರೇಬೀಸ್ ವೈರಸ್ ವಿಷಾಣು (ವಿದ್ಯುತ್ ಸೂಕ್ಷ್ಮದರ್ಶಕದ ಒಂದು ಚಿತ್ರ)

ಆಲ್ಕೋಹಾಲ್), ಸ್ಪಿರಿಟ್ ಹಾಗೂ ಮುಖ್ಯವಾಗಿ ಸಾಬೂನಿನಿಂದ ಸುಲಭವಾಗಿ ಸಾಯುತ್ತದೆ.

ಹುಚ್ಚು ನಾಯಿಯ ಜೊಲ್ಲಿನಲ್ಲಿ ಇದ್ದಾಗ ಇದಕ್ಕೆ ರಸ್ತೆ ಜೀವಾಣು ಎಂದು ಕರೆಯುತ್ತಾರೆ. ಇದೇ ಕಾಯಿಲೆಗೆ ಕಾರಣವಾದ ಜೀವಾಣು. ಆದರೆ ಇದೇ ಜೀವಾಣುವನ್ನು ಪ್ರಯೋಗಿಕ ಪ್ರಾಣಿಗಳಾದ ಜೀವಂತ ಮೊಲಗಳ ಮಿದುಳಿಗೆ ಚುಚ್ಚಿ ಹಾಗೆ ಸರಣಿ ಮಾಲೆಯಲ್ಲಿ ಬೆಳೆಸಿದಾಗ ಇದು ಬದಲಾವಣೆಗೊಳ್ಳುತ್ತದೆ. ಇದಕ್ಕೆ ಸ್ಥಿರ ಜೀವಾಣು ಎನ್ನುತ್ತಾರೆ. ಈ ಜೀವಾಣುವನ್ನು ಇಂದಿಗೂ ಲಸಿಕೆ ತಯಾರಿಸಲು ಉಪಯೋಗಿಸುತ್ತಾರೆ. ಈ ಜೀವಾಣುವನ್ನು ಮೊದಲಿಗೆ ಲೂಯಿ ಪಾಶ್ಚರ್ ರೂಪಗೊಳಿಸಿದ್ದರಿಂದ ಇದನ್ನು "ಪ್ಯಾಶ್ಚರ್ ಸೀಡ್ ವೈರಸ್" ಎಂದು ಕರೆಯುತ್ತಾರೆ. ಆದರೆ ಇಂದು ಅನೇಕ ಪ್ರಯೋಗಶಾಲೆಗಳು ತಮ್ಮದೇ ಆದ ಹಾಗೂ ವಿಶಿಷ್ಟ ತರಹದ ಸ್ಥಿರ ಜೀವಾಣುಗಳನ್ನು ಬೆಳೆಸಿರುವುದರಿಂದ ಲಸಿಕೆ ತಯಾರಿಕೆಗೆ ವಿವಿಧ ಬಗೆಯ ಬೀಜ(ಸೀಡ್) ವೈರಸ್‌ಗಳು ಲಭ್ಯವಾಗಿವೆ.

## ೨.೨ ಜಾಗತಿಕ ವಿಂಗಡನೆ

ವಿಶ್ವ ಆರೋಗ್ಯ ಸಂಸ್ಥೆಯು ಏಪ್ರಿಲ್ 1993ರಲ್ಲಿ ಇಂಡೋನೇಷಿಯದ ಜಕಾರ್ತ ನಗರದಲ್ಲಿ ನಡೆದ ಸಮ್ಮೇಳನದ ಅಂಕಿ ಅಂಶದ ಪ್ರಕಾರ ಪ್ರತಿವರ್ಷ 35,000 ಜನ ರೇಬೀಸ್ ಕಾಯಿಲೆಯಿಂದ ವಿಶ್ವದಲ್ಲಿ ಸಾಯುತ್ತಾರೆ. ಇವರಲ್ಲಿ ಬಹುಮಂದಿ ಏಷ್ಯಾ ಖಂಡದವರೂ, ಅದರಲ್ಲೂ ಭಾರತದವರು ಅತಿ ಹೆಚ್ಚಿನವರಾಗಿದ್ದಾರೆ.

**ರೇಬೀಸ್ : ವಿಶ್ವದ ಅಂಕ ಸಂಖ್ಯೆಗಳು – 1992**

| | ಖಂಡ | ರೇಬೀಸ್ ಸಾವು | ನಾಯಿ ಕಚ್ಚಿರುವುದಕ್ಕೆ ಲಸಿಕೆ ಪಡೆದವರಸಂಖ್ಯೆ | ಲಸಿಕೆಯಿಂದ ತೊಂದರೆಗೆ ಒಳಗಾದವರು. |
|---|---|---|---|---|
| 1 | ಏಷ್ಯಾ | 30,000 | 30 ಲಕ್ಷ | 1,500 |
| 2. | ಆಫ್ರಿಕ | 5,000 | 5 ಲಕ್ಷ | 750 |
| 3. | ಅಮೆರಿಕ | 200 | 5 ಲಕ್ಷ | 60 |

ಈ ಅಂಕಿ ಅಂಶಗಳ ವರದಿ ಕಡಿಮೆ ಎಂದೇ ಶಂಕಿಸಲಾಗಿದೆ. ಏಕೆಂದರೆ ಬಹಳಷ್ಟು ರೋಗಿಗಳು ಆಸ್ಪತ್ರೆಗಳಿಗೆ ಹೋಗದೆ ಮನೆಯಲ್ಲೇ ಸಾಯುವುದುಂಟು. ಹಾಗು ಇನ್ನು ಕೆಲವು ಸಾವುಗಳಲ್ಲಿ ರೋಗ ಲಕ್ಷಣಗಳು ವಿಭಿನ್ನವಾಗಿದ್ದು ರೋಗದ ಗುರುತು ಆಗದೇ ಇರುವ ಸಂಭವವು ಉಂಟು. ಹಾಗು ಕೆಲವು ರೋಗಿಗಳು ಖಾಸಗಿ ಆಸ್ಪತ್ರೆಗಳಲ್ಲಿ ಸಾವಿಗೀಡಾದರೆ ಅದು ಆರೋಗ್ಯ ಅಧಿಕಾರಿಗಳ ಗಮನಕ್ಕೆ ಬರದೆ ಅಂಕಿ ಅಂಶಗಳಲ್ಲಿ ಕೊರತೆ ಇರುತ್ತದೆ. ಆದರೆ ಕುತೂಹಲಕಾರಿಯಾದ ವಿಷಯವೇನೆಂದರೆ ಪ್ರಪಂಚದಲ್ಲಿ ಕೆಲವು ದೇಶಗಳಲ್ಲಿ ಈ ಭಯಾನಕ ರೋಗವು ಪೂರ್ಣ ನಿಯಂತ್ರಣಗೊಂಡಿರುವ ವಿವರಣೆಗಳು ಇವೆ.

**ವಿಶ್ವದಲ್ಲಿ ರೇಬೀಸ್‌ರೋಗ ರಹಿತ ರಾಷ್ಟ್ರಗಳು**

| | ವಿವರ | ದೇಶಗಳು |
|---|---|---|
| 1. | ಅಮೆರಿಕ | ಗಯಾನ, ಜಮೈಕ, ಉರುಗ್ವೆ. |
| 2. | ಏಷ್ಯ | ಬಾಹರೈನ್, ಓಮನ್, ಕಾತರ್, ಜಪಾನ್, ಮಲೇಷಿಯಾ, ಕೊರಿಯಾ. |
| 3. | ಯುರೋಪ್ | ಇಂಗ್ಲೆಂಡ್, ಸ್ಕಾಂಡಿನೇವಿಯ, ಸ್ಪೇನ್, ಪೋರ್ಚುಗಲ್ |
| 4. | ಓಷಿಯಾನಿಯ | ಆಸ್ಟ್ರೇಲಿಯ, ಫಿಜಿ, ಪಪುವನ್ಯೂಗಿನಿಯಾ. |

ಇನ್ನು ಏಷ್ಯಾ ಖಂಡದ ಅಂಕಿ ಅಂಶಗಳು ಹೀಗಿವೆ.

**ರೇಬೀಸ್ ಮರಣಗಳು: ವಿಶ್ವ ಚಿತ್ರ – 1992**

| | ರಾಷ್ಟ್ರ | ಸಾವುಗಳು |
|---|---|---|
| 1. | ಭಾರತ | 25,000 |
| 2. | ಬಾಂಗ್ಲದೇಶ | 2,000 |
| 3. | ಚೀನ | 1,000 |
| 4. | ವಿಯಟ್‌ನಾಂ | 300 |

| | | |
|---|---|---|
| 5. | ನೇಪಾಳ | 150 |
| 6. | ಶ್ರೀಲಂಕ | 100 |
| 7. | ಥಾಯಲ್ಯಾಂಡ್ | 100 |
| 8. | ಇತರೇ ದೇಶಗಳು | ! 350* |
| | ಒಟ್ಟು | 30,000 |

(*– ಪಾಕಿಸ್ತಾನ, ಇಂಡೋನೇಶಿಯಾ, ಕಾಂಬೋಡಿಯಾ, ಲಾವೋಸ್, ತೈವಾನ, ಹಾಂಗ್‌ಕಾಂಗ್ ಹಾಗು ಇತರ ದೇಶಗಳು.)




ಚಿತ್ರ 2.2 ರೇಬೀಸ್ ಜಾಗತಿಕ ವಿಂಗಡಣೆ

ಅತಿ ಆಶ್ಚರ್ಯವೆಂದರೆ ಭಾರತವು ಪ್ರತಿವರ್ಷ 25,000 ಜನ ರೇಬೀಸ್‌ನಿಂದ ಮರಣ ಹೊಂದುವುದನ್ನು ವಿಶ್ವ ಆರೋಗ್ಯ ಸಂಸ್ಥೆಗೆ ತಿಳಿಸುತ್ತಿದ್ದರೂ (ವಿಶ್ವದಲ್ಲಿನ ಶೇಕಡಾ 71ರಷ್ಟು, ಏಷ್ಯಾದಲ್ಲಿನ ಶೇಕಡಾ 83ರಷ್ಟು ಸಾವುಗಳು ಭಾರತದಲ್ಲಿ) ಈ ಕಾಯಿಲೆ ಬಗ್ಗೆ ಇನ್ನೂ ಯಾವುದೇ ಆದ ಖಚಿತವಾದ ರಾಷ್ಟ್ರೀಯ ಕಾರ್ಯಕ್ರಮಗಳನ್ನು ಭಾರತ ಸರ್ಕಾರವಾಗಲಿ ಅಥವ ಯಾವುದೇ ರಾಜ್ಯ ಸರ್ಕಾರವೇ ಆಗಲಿ ರೋಗ ನಿಯಂತ್ರಣಕ್ಕೆ ರೂಪಿಸಿಲ್ಲ.

ಇನ್ನು ರೇಬೀಸ್ ಕಾಯಿಲೆ ಇರುವ ರಾಷ್ಟ್ರಗಳಲ್ಲಿ ಎಲ್ಲ ರಾಜ್ಯಗಳಲ್ಲೂ ಈ ಕಾಯಿಲೆ ಕಂಡು ಬರದೆ ಇರಬಹುದು. ಉದಾಹರಣೆಗೆ ನಮ್ಮ ಭಾರತದಲ್ಲೇ ಅಂಡಮಾನ್, ನಿಕೋಬಾರ್ ಹಾಗೂ ಲಕ್ಷದ್ವೀಪಗಳಲ್ಲಿ ಈ ಕಾಯಿಲೆಯ ವರದಿಗಳಿಲ್ಲ.

ಈ ರೇಬೀಸ್ ಕಾಯಿಲೆ ಕೂಡ ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ಪ್ರಾಣಿಗಳಿಂದ ಹರಡುತ್ತದೆ.

**ವಿಶ್ವದಲ್ಲಿ ಸಾಮಾನ್ಯವಾಗಿ ರೇಬೀಸ್ ಹರಡುವ ಪ್ರಾಣಿಗಳು**

| ಪ್ರಾಣಿ | ದೇಶ |
|---|---|
| 1. ನಾಯಿ ಹಾಗು ಬೆಕ್ಕು | ಏಷ್ಯ (ಭಾರತ) |
| 2. ಗುಳ್ಳೆನರಿ, ನರಿ, ತೋಳ | ಯುರೋಪ್, ಉತ್ತರ ಅಮೆರಿಕ, ರಷ್ಯ |
| 3. ರಾಕೂನ್ | ಅಮೆರಿಕ, ರಷ್ಯ |
| 4. ಮುಂಗುಸಿ | ಉತ್ತರ ಅಮೆರಿಕ |
| 5. ಬಾವಲಿ | ದಕ್ಷಿಣ ಅಮೆರಿಕ |
| 6. ಕುಡು ಜಿಂಕೆ | ನಮೀಬಿಯಾ |
| 7. ಹಸು | ದಕ್ಷಿಣ ಅಮೆರಿಕ |

ಭಾರತದಲ್ಲಿ ಶೇಕಡಾ 95ರಷ್ಟು ರೇಬೀಸ್ ಕಾಯಿಲೆಯು ನಾಯಿಯಿಂದ ಬರುತ್ತದೆ. ಇನ್ನು ಉಳಿದ ಐದರಷ್ಟು ರೇಬೀಸ್




ಚಿತ್ರ 2.3 ನಮ್ಮ ದೇಶದಲ್ಲಿ ಸಾಮಾನ್ಯವಾಗಿ ರೇಬೀಸ್ ಹರಡುವ ಪ್ರಾಣಿಗಳು

ಕಾಯಿಲೆಯು ಬೆಕ್ಕು, ಮುಂಗುಸಿ, ಕೋತಿ ಹಾಗು ಇತರೆ ಪ್ರಾಣಿಗಳಿಂದ ಬರುತ್ತದೆ. ಇದಲ್ಲದೆ ಯಾವುದೇ ಬಿಸಿರಕ್ತದ ಪ್ರಾಣಿಯು ಅದರಲ್ಲೂ ಕಾಡು ಪ್ರಾಣಿಯು ಹಾಗು ನಿಶಾಚರ (ರಾತ್ರಿ ವೇಳೆ ಹೊರಬರುವ ಪ್ರಾಣಿ) ಪ್ರಾಣಿಯು ಹಗಲಿನಲ್ಲಿ ಮನುಷ್ಯನ ಭಯ ತೊರೆದು ಆಕ್ರಮಣ ಮಾಡಿದರೆ ಅಂತಹ ಪ್ರಾಣಿಯಿಂದ ರೇಬೀಸ್ ಸೋಂಕು ತಗಲಬಹುದು. ಅಂತಹ ಪ್ರಾಣಿಗಳನ್ನು ಪ್ರಯೋಗಶಾಲೆಯಲ್ಲಿ ರೇಬೀಸ್ ರೋಗದ ತಪಾಸಣೆ ಮಾಡುವುದು ಸಾಧ್ಯವಿಲ್ಲವಾದುದರಿಂದ ಆ ಪ್ರಾಣಿಗೆ ರೇಬೀಸ್ ರೋಗ ಇದೆಯೆಂದು ಭಾವಿಸಿ ಕಚ್ಚಿದವರಿಗೆ ಚಿಕಿತ್ಸೆ ನೀಡಬೇಕಾಗುತ್ತದೆ.

ಕರ್ನಾಟಕದಲ್ಲಿ ಬೆಂಗಳೂರು ಸರ್ಕಾರಿ ಪಶುವೈದ್ಯ ಕಾಲೇಜು ರೋಗಶಾಸ್ತ್ರ ವಿಭಾಗದ 18 ವರ್ಷಗಳ ಪ್ರಾಣಿಶವ ಪರೀಕ್ಷೆಯ ವರದಿಯ ಪ್ರಕಾರ ರೇಬೀಸ್ ಕಾಯಿಲೆಯು ನಾಯಿ, ಬೆಕ್ಕು, ಹಂದಿ, ಕುದುರೆ, ಮೇಕೆ, ಹಸು, ಕಾಡು ಪ್ರಾಣಿಗಳಾದ ನರಿ ಹಾಗು ಕರಡಿಯಲ್ಲಿ ಕಂಡು ಬಂದಿದೆ.

**ಬೆಂಗಳೂರಿನ ಸರ್ಕಾರಿ ಪಶುವೈದ್ಯ ಕಾಲೇಜು ರೋಗಶಾಸ್ತ್ರ ವಿಭಾಗದ 1972-1990ರ ಅವಧಿಯಲ್ಲಿ ರೇಬೀಸ್‌ಗಾಗಿ ಪ್ರಾಣಿ ಶವಪರೀಕ್ಷೆ ಮಾಡಿದ ವರದಿ ವಿವರ**

| ಪ್ರಾಣಿ | ಪರೀಕ್ಷಿಸಿದ ಒಟ್ಟು ಸಂಖ್ಯೆ | ರೇಬೀಸ್ ಧೃಡೀಕರಣಗೊಂಡ ಪ್ರಾಣಿಗಳ ಸಂಖ್ಯೆ |
|---|---|---|
| ನಾಯಿ | 1623 | 812 |
| ಹಸು | 194 | 131 |
| ಬೆಕ್ಕು | 45 | 5 |
| ಕುದುರೆ | 28 | 6 |
| ಮೇಕೆ | 2 | 2 |
| ನರಿ | 3 | 2 |
| ಹಂದಿ | 3 | 2 |
| ಕರಡಿ | 1 | 1 |
| ಇತರ ಪ್ರಾಣಿಗಳು* | 19 | 0 |

* ಅಳಿಲು, ಇಲಿ, ಹೆಗ್ಗಣ, ಮೊಲಗಳು, ಗೊರಿಲ್ಲ, ಹುಲಿಮರಿ, ಜಿಂಕೆ, ಕುರಿ, ಇತ್ಯಾದಿ.

ಸುಮಾರು 25,000 ಜನ ನಮ್ಮ ದೇಶದಲ್ಲಿ ಪ್ರತಿ ವರ್ಷ ರೇಬೀಸ್ ಕಾಯಿಲೆಯಿಂದ ಮರಣ ಹೊಂದುತ್ತಿದ್ದಾರೆ ಎನ್ನುವ ದಾಖಲೆಗಳಿವೆ. ಇದಲ್ಲದೆ 1981ರ ಒಂದು ವರದಿಯಂತೆ 80 ದಶಲಕ್ಷ ನಾಯಿಗಳು ಭಾರತದಲ್ಲಿವೆ ಹಾಗು ಮನುಷ್ಯ ನಾಯಿ ಸರಾಸರಿ 40:1 ಇದೆ ಎಂದು ಅಂದಾಜು ಮಾಡಲಾಗಿದೆ. 5ಲಕ್ಷ ಜನರು ನಾಯಿ ಕಚ್ಚಿದುದಕ್ಕೆ ಔಷಧಿಯನ್ನು (ಲಸಿಕೆ) ಪ್ರತಿ ವರ್ಷ ಪಡೆಯುತ್ತಾರೆ. ಇದರಿಂದ 4.2 ದಶಲಕ್ಷ ಮನುಷ್ಯನ ದಿನಗಳ ಕೆಲಸ ನಷ್ಟವಾಗುತ್ತಿದೆ. 40 ದಶಲಕ್ಷ ಮಿ.ಲೀ ನರಸತ್ವ ಲಸಿಕೆಯನ್ನು (ನರ್ವ್ ಟಿಶ್ಯು ವ್ಯಾಕ್ಸೀನ್) ಭಾರತದ, ಹನ್ನೆರಡು ಕೇಂದ್ರಗಳಲ್ಲಿ ತಯಾರಿಸಲಾಗುತ್ತಿದೆ. ಒಂದು

ಅಧ್ಯಯನದ ಪ್ರಕಾರ ಒಂದು ವೈದ್ಯಕೀಯ ಕಾಲೇಜಿನ ಆಸ್ಪತ್ರೆಯಲ್ಲಿ ಪ್ರತಿ ಎರಡು ಸಾವಿರ ಒಳ ರೋಗಿಗಳಲ್ಲಿ ಒಬ್ಬ ರೇಬೀಸ್ ರೋಗಿ ದಾಖಲಾಗುತ್ತಾನೆಂದು ವರದಿಯಾಗಿದೆ.

ಕರ್ನಾಟಕದಲ್ಲಿ ಬೆಂಗಳೂರಿನ ಸಾಂಕ್ರಾಮಿಕ ರೋಗದ ಆಸ್ಪತ್ರೆಯವರ ವರದಿಯಂತೆ ಪ್ರತಿ ವರ್ಷ ಅಂದಾಜು 56-95 ರೋಗಿಗಳು ರೇಬೀಸ್‌ನಿಂದ ಸಾಯುತ್ತಿದ್ದಾರೆ. ಆದರೆ ಬಹುತೇಕ ರೋಗಿಗಳು ಈ ಆಸ್ಪತ್ರೆಗೆ ಬರದೆ, ಮನೆಯಲ್ಲೋ ಅಥವ ಬೇರೆ ಆರೋಗ್ಯ ಕೇಂದ್ರಗಳಲ್ಲೊ ಅಥವ ಖಾಸಗಿ ಆಸ್ಪತ್ರೆಗಳಲ್ಲಿ ಸಾಯುತ್ತಿರುವ ಸಂಭವವುಂಟು. ಕೆಲವು ರೋಗಗಳು ಯಾರಿಗಾದರೂ ತಗುಲಿದಾಗ ಕಡ್ಡಾಯವಾಗಿ ಸಾರ್ವಜನಿಕವಾಗಿ ಆರೋಗ್ಯ ಇಲಾಖೆಗೆ ತಿಳಿಸಬೇಕು. ಆದರೆ ರೇಬೀಸ್ ಈ ಕಾಯಿಲೆಗಳ ಪಟ್ಟಿಯಲ್ಲಿಲ್ಲ. ಆದುದರಿಂದ ಇದರ ಸರಿಯಾದ ಅಂಕಿ ಅಂಶಗಳನ್ನು ಅಂದಾಜು ಮಾಡಲು ಇಂದಿಗೂ ಕಷ್ಟವೆಂದು ಸಾಂಕ್ರಾಮಿಕ ರೋಗ ಆಸ್ಪತ್ರೆಯ ಸಮೀಕ್ಷೆಯು ಅಭಿಪ್ರಾಯಪಡುತ್ತದೆ.

| ವರುಷ | ಒಟ್ಟು ರೇಬೀಸ್‌ನಿಂದ ದಾಖಲಾದ ರೋಗಿಗಳು |
|---|---|
| 1974 | 80 |
| 1975 | 95 |
| 1976 | 83 |
| 1977 | 77 |
| 1978 | 79 |
| 1979 | 83 |
| 1980 | 82 |
| 1981 | 65 |
| 1982 | 71 |
| 1983 | 69 |
| 1984 | 82 |
| 1985 | 79 |

| | |
|---|---|
| 1986 | 72 |
| 1987 | 91 |
| 1988 | 70 |
| 1989 | 58 |
| 1990 | 65 |
| 1991 | 56 |

ಇನ್ನೊಂದು ಸ್ವಾರಸ್ಯದ ವಿಷಯವೆಂದರೆ ಒಂದು ಹುಚ್ಚುನಾಯಿಯು ಸುಮಾರು 45 ಕಿ.ಮೀ. ದೂರದವರೆವಿಗೂ ಸುತ್ತಾಡಬಹುದು ಹಾಗು ಅದು ಬದುಕಿರುವ 5-10 ದಿನಗಳಲ್ಲಿ 60-100 ಜನರನ್ನು ಕಚ್ಚಿ ರೇಬೀಸ್ ಸೋಂಕನ್ನು ಹರಡುವ ಸಾಧ್ಯತೆಗಳು ಉಂಟು.

### ೨.೩ ಹರಡುವ ವಿಧಾನ

ರೇಬೀಸ್ ಕಾಯಿಲೆಯು ಸಾಮಾನ್ಯವಾಗಿ ಪ್ರಾಣಿಗಳಿಂದ ಮನುಷ್ಯನಿಗೆ ಈ ರೀತಿಗಳಲ್ಲಿ ಹರಡುತ್ತದೆ.

ಅ. ರೋಗಗ್ರಸ್ಥ ಪ್ರಾಣಿಯು ಕಚ್ಚುವುದರಿಂದ

ಆ. ರೋಗಗ್ರಸ್ಥ ಪ್ರಾಣಿಯು ನೆಕ್ಕುವುದರಿಂದ (ಅದರಲ್ಲೂ ಕಣ್ಣಿನಲ್ಲಿ, ನಾಲಿಗೆ ಅಥವಾ ಬಾಯಿಗೆ ಪ್ರಾಣಿಯ ಜೊಲ್ಲು ಬಿದ್ದರೆ ಅಪಾಯ)

ಬಾವಲಿಗಳಿಂದ ಹರಡುವ ಕಾಯಿಲೆಯಲ್ಲಿ (ಇದು ದಕ್ಷಿಣ ಅಮೆರಿಕ, ಜಮೈಕ ಹಾಗು ಲ್ಯಾಟಿನ್ ಅಮೆರಿಕಾದಲ್ಲಿ ಇದೆ) ಈ ಪ್ರಾಣಿಗಳ ಜೊಲ್ಲಿನ ತುಂತುರನ್ನು ಉಸಿರಿನಲ್ಲಿ ಒಳಕ್ಕೆ ತೆಗೆದುಕೊಂಡಾಗ, ಅದಲ್ಲದೆ ಮನುಷ್ಯನು ಅವುಗಳು ವಾಸಿಸುವ ಗುಹೆಯೊಳಗೆ ಹೋಗಿ ಬಂದ ನಂತರ ಈ ಕಾಯಿಲೆ ಬಂದಿದೆ. ಆದರೆ ಭಾರತದಲ್ಲಿ ಬಾವಲಿಗಳಿಂದ ರೇಬೀಸ್ ಮನುಷ್ಯನಿಗೆ ಬಂದಿರುವ ದಾಖಲೆಗಳಿಲ್ಲ.

ಇದಲ್ಲದೆ ರೇಬೀಸ್ ರೋಗಿಯಿಂದ ಅರಿಯದೆ ನೇತ್ರದಾನ ಪಡೆದ ವ್ಯಕ್ತಿಗೆ ರೇಬೀಸ್ ಬಂದಿರುವ ದಾಖಲೆಗಳಿವೆ. ಅತಿ ವಿರಳವಾಗಿ ರೇಬೀಸ್ ರೋಗಿಯು (ಬಾಯಿಯಲ್ಲಿ ಆಹಾರ ಹಾಕಲು ಹೋದಾಗ)

ಆಕಸ್ಮಾತ್ತಾಗಿ ಕಚ್ಚಿದರೆ ಕಚ್ಚಿಸಿಕೊಂಡ ವ್ಯಕ್ತಿಗೆ ರೇಬೀಸ್ ಬಂದಿರುವುದುಂಟು. ಆದರೆ ಇಲ್ಲಿ ನೆನಪಿಡಬೇಕಾದ ವಿಷಯವೆಂದರೆ ಸಾಮಾನ್ಯವಾಗಿ ರೇಬೀಸ್ ರೋಗಿಯು ಪಿಶಾಚಾರಣ (ಹುಚ್ಚು ನಾಯಿಯಂತೆ) ಬೇರೆಯವರನ್ನು ಕಚ್ಚುವುದಿಲ್ಲ. ರೇಬೀಸ್ ರೋಗಿಯು ಹುಚ್ಚುನಾಯಿಯಂತೆ ಎಲ್ಲರನ್ನು ಕಚ್ಚುತ್ತಾನೆ ಎನ್ನುವುದು ತಪ್ಪು ಭಾವನೆ.

ಒಮ್ಮೊಮ್ಮೆ ರೇಬೀಸ್ ಕಾಯಿಲೆಗೆ ತುತ್ತಾಗಿರುವ ಹಸುವಿನ ಹಾಲನ್ನು ಕಾಯಿಸದೆ ಕುಡಿದಿದ್ದರೆ ಅಂತಹ ವ್ಯಕ್ತಿಗಳಿಗೆ ರೇಬೀಸ್ ಬರಬಹುದು. ಆದರೆ ಈಗ ತಿಳಿದಿರುವಮಟ್ಟಿಗೆ ಹಾಲನ್ನು ಕಾಯಿಸಿ ಕುಡಿದರೆ ಏನು ತೊಂದರೆಯಿಲ್ಲ.

ಅತಿ ಮುಖ್ಯವಾಗಿ ನೆನಪಿಡಬೇಕಾದ ವಿಷಯವೆಂದರೆ,ರೇಬೀಸ್ ಪ್ರಾಣಿಯ ಜೊಲ್ಲು, ರೇಬೀಸ್ ರೋಗಿಯ ಜೊಲ್ಲು, ಮೂತ್ರ ಹಾಗು ಕಣ್ಣುಗುಡ್ಡೆಯ ಪಾರದರ್ಶಕ ಭಾಗ (ಕಾರ್ನಿಯ) ಇದು ರೇಬೀಸ್ ವೈರಸ್ ರೋಗಾಣುವಿನ ಮುಖ್ಯ ಮೂಲಗಳು. ಆದುದರಿಂದ ಮನುಷ್ಯನು ಇವುಗಳ ಸಂಪರ್ಕದಿಂದ ದೂರವಿದ್ದರೆ ರೇಬೀಸ್ ಬರುವುದು ಸಾಧ್ಯವಿಲ್ಲ.

## ೨.೪ ರೋಗ ಪಕ್ವ ಸ್ಥಿತಿಯ ಕಾಲ

ಸಾಮಾನ್ಯವಾಗಿ ರೇಬೀಸ್ ಹುಚ್ಚು ನಾಯಿಯು ಮನುಷ್ಯನನ್ನು ಕಚ್ಚಿದ 3 ವಾರದಿಂದ 3 ತಿಂಗಳ ನಂತರ ಮನುಷ್ಯನಲ್ಲಿ ರೇಬೀಸ್ ಕಾಯಿಲೆ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ಈ ಅವಧಿಯಲ್ಲಿ ರೇಬೀಸ್ ವೈರಸ್ ಮನುಷ್ಯನ ದೇಹದ ನರಗಳಲ್ಲಿ ವೃದ್ಧಿಗೊಳ್ಳುತ್ತದೆ. ನಂತರ ಇದು ನರಗಳಲ್ಲಿ ಸಾಗುತ್ತ ಮಿದುಳನ್ನು ಸೇರಲು ಹಾಗು ರೋಗ ಲಕ್ಷಣಗಳು ಕಾಣಿಸಲು ಸಮಯ ಬೇಕಾಗುತ್ತದೆ. ಈ ಸಮಯಕ್ಕೆ ರೋಗ ಪಕ್ವಸ್ಥಿತಿಯ ಕಾಲವೆಂದು ಕರೆಯುತ್ತಾರೆ. ಈ ಸಮಯ ಒಮ್ಮೊಮ್ಮೆ ಅತಿ ಕಡಿಮೆ ಎಂದರೆ 4 ದಿನಗಳು ಹಾಗು ಅತಿ ಹೆಚ್ಚೆಂದರೆ 4ವರ್ಷಗಳಾದರೂ ಆಗಬಹುದು. ಸಾಮಾನ್ಯವಾಗಿ ರೋಗಪಕ್ವಸ್ಥಿತಿಯಕಾಲ ನಾಯಿ ಕಚ್ಚಿದ ಸ್ಥಳವನ್ನು ಅವಲಂಬಿಸಿರುತ್ತದೆ. (ಅ) ಮುಖದ ಮೇಲಾದರೆ

ಒಂದು ತಿಂಗಳು (ಅ) ಎದೆ, ಬೆನ್ನು, ಸೊಂಟ, ಕೈ ಮೇಲಾದರೆ ಎರಡು ತಿಂಗಳು (ಇ) ಕಾಲುಗಳಾದರೆ ಮೂರು ತಿಂಗಳು ಆಗುತ್ತದೆ.

ಕಚ್ಚಿದ ಗಾಯವು ತಲೆಗೆ (ಮಿದುಳಿಗೆ) ಸಮೀಪವಿದ್ದಷ್ಟು ರೋಗ ಪಕ್ವಸ್ಥಿತಿಯ ವೇಳೆಯು ಕಡಿಮೆ ಆಗುತ್ತದೆ. ಕೈಗಳಲ್ಲಿ ನರಗಳ ಸಂಖ್ಯೆ ಜಾಸ್ತಿ ಇರುವುದರಿಂದ ಕೈಗಳಮೇಲೆ ಕಚ್ಚಿದಾಗ ಹಾಗು ಅತಿ ತೀವ್ರವಾಗಿ ಹಾಗು ಆಳವಾಗಿ ಕಚ್ಚಿದ್ದರೆ ಜೊಲ್ಲಿನಲ್ಲಿರುವ ವೈರಸ್, ನರಮಂಡಲ ಸೇರುವ ಸಾಧ್ಯತೆ ಜಾಸ್ತಿ. ಆಗ ರೋಗ ಪಕ್ವಸ್ಥಿತಿಯ ಕಾಲ ಕಡಿಮೆಯಾಗುತ್ತದೆ.

## ೨.೫ ರೋಗ ವಿಧಾನ

ಹುಚ್ಚು ನಾಯಿಯು ಕಚ್ಚಿದ ನಂತರ ಅದರ ಜೊಲ್ಲು ಗಾಯದಲ್ಲಿ ಲೇಪನಗೊಂಡು, ಜೊಲ್ಲಿನಲ್ಲಿರುವ ರೇಬೀಸ್ ವೈರಸ್ ಗಾಯದಲ್ಲಿ ವೃದ್ಧಿಗೊಳ್ಳುತ್ತದೆ. ನಂತರ ಅದು ಗಾಯದ ಜಾಗದಲ್ಲಿರುವ




ಚಿತ್ರ 2.4 ದೇಹದಲ್ಲಿ ರೇಬೀಸ್ ವಿಷಾಣು ಮಿದುಳನ್ನು ತಲುಪುವ ವಿಧಾನ

ಸ್ನಾಯುಕೋಶಗಳಲ್ಲಿ ಇನ್ನಷ್ಟು ವೃದ್ಧಿಗೊಳ್ಳುತ್ತದೆ. ಆ ನಂತರ ಸ್ಥಳೀಯ ನರದ ಪದರದೊಳಗೆ ತೂರಿ ಆ ನರದ ಮೂಲಕ ನರಮಂಡಲಕ್ಕೆ ಪ್ರಯಾಣಿಸುತ್ತದೆ. ಇದು ಗಂಟೆಗೆ 3 ಮಿಲಿಮೀಟರ್ ವೇಗದಲ್ಲಿ ಚಲಿಸಿ ನರಮಂಡಲ ಬೆನ್ನುಹುರಿ ಮಿದುಳು ತಲುಪಿ ಅಲ್ಲಿರುವ ನರಕೋಶಗಳನ್ನು ನಾಶಮಾಡಿ ಹಾಗೆಯೇ ಪುನಃ ನರಗಳ ಮೂಲಕ ಜೊಲ್ಲುಗ್ರಂಥಿ ಹಾಗು ದೇಹದ ಇತರೇ ಅವಯವಗಳನ್ನು ತಲುಪುತ್ತದೆ.

ಹೀಗೆ ಕೊನೆಯಲ್ಲಿ ರೋಗಿಯ ಜೊಲ್ಲು, ಮೂತ್ರ ಹಾಗೂ ಕಣ್ಣೀರಿನಲ್ಲಿ ರೇಬೀಸ್ ವೈರಸ್‌ಗಳು ಕಂಡು ಬರುತ್ತವೆ.

## ೨.೬ ರೋಗ ಲಕ್ಷಣಗಳು

ರೇಬೀಸ್ ವೈರಸ್ ನರಮಂಡಲವನ್ನು ತಲುಪಿದ ನಂತರ ಮಿದುಳಿನ ನರಕೋಶಗಳನ್ನು ನಾಶಮಾಡುತ್ತದೆ. ಇದರಿಂದ ರೇಬೀಸ್ ರೋಗಲಕ್ಷಣಗಳು ನರವ್ಯವಸ್ಥೆಗೆ ಉಂಟಾಗುವ ತೊಂದರೆಯಿಂದ ಕಾಣಿಸಿಕೊಳ್ಳುತ್ತದೆ. ಮನುಷ್ಯನಲ್ಲಿ ರೇಬೀಸ್ ಕಾಯಿಲೆಯು ಎರಡು ರೂಪಗಳಲ್ಲಿ ಕಾಣಿಸಿಕೊಳ್ಳುತ್ತದೆ.

(ಅ) ಜಲಭಯ (ಹೈಡ್ರೋಫೋಬಿಯಾ):– ಈ ರೀತಿಯ ಲಕ್ಷಣವು ಶೇಕಡಾ ೮೦ ರೋಗಿಗಳಲ್ಲಿ ಕಂಡುಬರುತ್ತದೆ.



ಚಿತ್ರ 2.5 ಜಲಭಯ




ಚಿತ್ರ 2.6 ಅತಿಜೊಲ್ಲು ಸ್ರಾವ

ಇಂತಹ ರೋಗಿಗಳು ಮೊದಲಿಗೆ ಜ್ವರ, ತಲೆನೋವು, ಸುಸ್ತು, ನಿತ್ರಾಣ, ಚಡಪಡಿಕೆ, ಗಾಬರಿ, ಮೈಕೈನೋವಿನಿಂದ 3-4 ದಿನ ನರಳುತ್ತಾರೆ. ಇಂತಹ ಸ್ಥಿತಿಯಲ್ಲಿ ಸ್ಪಷ್ಟವಾದ ರೇಬೀಸ್ ರೋಗ ಲಕ್ಷಣಗಳು ಕಾಣಿಸದೆ, ರೋಗ ನಿರ್ಣಯ ಆಗುವುದಿಲ್ಲ. ಸಂಬಂಧಿಕರು, ಸ್ನೇಹಿತರು, ಆಪ್ತರು ಹಾಗೂ ವೈದ್ಯರಿಗೂ ಸಹ ಇಂತಹ ರೋಗಮಟ್ಟದಲ್ಲಿ, ರೋಗನಿರ್ಣಯ ಕಷ್ಟಕರ.

ಈ ರೋಗಿಗಳಲ್ಲಿ ನಿಧಾನವಾಗಿ ವಾಂತಿ, ನಿದ್ರಾಹೀನತೆ ಹಾಗು ನಾಯಿಕಚ್ಚಿದ ಜಾಗದಲ್ಲಿ ಕೆರೆತ/ನವೆ ಉಂಟಾಗುತ್ತದೆ. ಇದು ರೋಗದ ಅತಿ ಮೊದಲು ಗುರುತಿಸಬಹುದಾದ ಚಿಹ್ನೆ. ನಂತರ ರೋಗಿಯಲ್ಲಿ ನಿಧಾನವಾಗಿ ನೀರು ಕುಡಿಯಲು ತೊಂದರೆ ಉಂಟಾಗಿ, ನಂತರ ನೀರನ್ನು ನಿರಾಕರಿಸಿ ಕೊನೆಗೆ ಜಲಭಯ ಬರುತ್ತದೆ. ಇಂತಹ ರೋಗಿಗಳ ಬಳಿ ನೀರಿನ ಲೋಟ ತೆಗೆದುಕೊಂಡು ಹೋದರೆ ಅವರುಗಳು ಗಾಬರಿಗೊಳ್ಳುವುದು, ಲೋಟವನ್ನು ಬಿಸಾಡುವುದು, ಹಾಗೂ ಒಮ್ಮೊಮ್ಮೆ ಸ್ನಾಯು ಸೆಳೆತ (Spasms) ಬಂದು ನರಳುವುದುಂಟು. ಅವರುಗಳು ಅತಿ ಭಯಗ್ರಸ್ತರಾಗುತ್ತಾರೆ. ನಿಧಾನವಾಗಿ ಅವರಿಗೆ ಬೆಳಕಿನ ಬಗೆಗೂ

ಭಯಬರುತ್ತದೆ. ಅವರು ಕತ್ತಲಲ್ಲಿರಬಯಸುತ್ತಾರೆ. ಒಮ್ಮೊಮ್ಮೆ ಗಾಳಿ ಬೀಸಿದರೆ ಅವರಿಗೆ ಸೆಳೆತ ಬಂದು, ಗಾಳಿಭಯ ಬರಬಹುದು. ಒಮ್ಮೊಮ್ಮೆ ಕೆಲ ರೋಗಿಗಳು ಉದ್ರೇಕಗೊಂಡು ಏನಾದರೂ ಅನಾಹುತ ಮಾಡಬಹುದು ಆದರೆ ಸಾಮಾನ್ಯವಾಗಿ ಜನಭಾವಿಸುವಂತೆ ಅವರು ನಾಯಿಗಳಂತೆ ಬೊಗಳುತ್ತಾರೆ, ಕಚ್ಚುತ್ತಾರೆ, ಹಾಗು ನಾಯಿಯಂತೆ ವರ್ತಿಸುತ್ತಾರೆ ಎನ್ನುವುದು ಸುಳ್ಳು; ಕೆಲರೋಗಿಗಳ ಧ್ವನಿ ಪೆಟ್ಟಿಗೆ ಊದಿಕೊಂಡು ಅವರ ಧ್ವನಿ ಬದಲಾಗಿ ಕರ್ಕಶಗೊಳ್ಳುತ್ತದೆ. ಇದನ್ನು ಕೆಲವರು ನಾಯಿಧ್ವನಿ ಎಂದು ಅಪಾರ್ಥ ಮಾಡಿಕೊಂಡು ನಾಯಿಯ ತರಹ ವರ್ತಿಸುತ್ತಾರೆ ಎಂದು ಹೇಳುವುದುಂಟು




ಚಿತ್ರ 10. ರೇಬೀಸ್ ರೋಗಿಯಲ್ಲಿ ಗಾಳಿ ಭಯ

ಈ ರೋಗಿಗಳು ಸಾಯುವುದುಖಂಡಿತ ಮನೆಯಲ್ಲೇ ಆದರೆ 2-3 ದಿನಗಳಲ್ಲಿ ಸಾವನ್ನಪ್ಪುತ್ತಾರೆ. ಆಸ್ಪತ್ರೆಯಲ್ಲಿ ಚಿಕಿತ್ಸೆ ದೊರೆತರೆ 4-5 ದಿನಗಳಲ್ಲಿ ಸಾವಿಗೀಡಾಗುತ್ತಾರೆ. ಆಸ್ಪತ್ರೆಯಲ್ಲಾದರೆ ಅವರಿಗೆ ಕೆಲವು ಔಷಧಿಗಳನ್ನು ನೀಡಿ ಅವರ ಯಾತನೆ, ಸಂಕಟ, ನೋವು ಶಮನಗೊಳಿಸಬಹುದು, ಸಾವಿನ ನೋವನ್ನು ಕಡಿಮೆ ಮಾಡಬಹುದು. ಆಸ್ಪತ್ರೆಯಲ್ಲಿ ದಾದಿಯರ ಶುಶ್ರೂಷೆಯಿಂದ ಹಾಗೂ ಕೆಲವು ಮುನ್ನೆಚ್ಚರಿಕೆ ಕ್ರಮಗಳನ್ನು ವಹಿಸುವುದರಿಂದ ರೋಗಿಯ ಆರೈಕೆ ಕ್ರಮವಾಗಿ ನಡೆದು ರೋಗಿಯಿಂದ ಇತರರಿಗೆ ರೋಗಬರದಂತಹ ಮುನ್ನೆಚ್ಚರಿಕೆ ಕ್ರಮಗಳನ್ನು ಅನುಸರಿಸಲು ಸಾಧ್ಯ. ಆದುದರಿಂದ ಇಂತಹ ರೋಗಿಗಳನ್ನು ಆಸ್ಪತ್ರೆಗೆ ಸೇರಿಸುವುದು ಒಳ್ಳೆಯದು.

## ಆ. ಲಕ್ವ ಲಕ್ಷಣದ ರೇಬೀಸ್

ಈ ರೀತಿಯ ಲಕ್ಷಣವು ಸುಮಾರು ಶೇಕಡಾ 20 ರೋಗಿಗಳಲ್ಲಿ ಕಂಡು ಬಂದು ಒಮ್ಮೊಮ್ಮೆ ವೈದ್ಯರಿಗೂ ಬೇಗ ಗುರುತಿಸಲು



ಚಿತ್ರ 11. ಲಕ್ವಲಕ್ಷಣದ ರೇಬೀಸ್

ಕಷ್ಟವಾಗುತ್ತದೆ. ಇಂತಹ ಶೇಕಡ 50 ರೋಗಿಗಳಲ್ಲಿ ಜಲಭಯ ಕಂಡುಬರುವುದಿಲ್ಲ. ಇದರಿಂದ ರೋಗ ಗುರುತಿಸಲು ಇನ್ನೂ ಕಷ್ಟವಾಗುತ್ತದೆ. ಈ ರೋಗಿಗಳಲ್ಲಿ ಸಾಮಾನ್ಯವಾಗಿ ಮೊದಲಿಗೆ ಜೋಮು ಹಿಡಿಯುವುದು, ಚಳಕು, ನಿಧಾನವಾಗಿ ದೇಹದ ಮೇಲೆ ಸ್ವಾಧೀನ ಕಮ್ಮಿಯಾಗುವುದು ಕಾಣುತ್ತದೆ. ಹಾಗೂ ಕೊನೆಗೆ ಲಕ್ವ ಹೊಡೆಯುತ್ತದೆ. ಇವರ ಮೂತ್ರಕೋಶ ಮೂತ್ರ ತುಂಬಿಕೊಂಡು ಊದಿಕೊಳ್ಳುತ್ತದೆ. ರೋಗಿಗೆ ಮಲಬದ್ಧತೆ ಆಗಬಹುದು. ಈ ರೋಗಿಗಳು ಸುಮಾರು 1-2 ವಾರದ ವರೆಗೆ ಜೀವಿಸುತ್ತಾರೆ.

ಇದುವರೆಗೆ ಜಗತ್ತಿನಲ್ಲಿ ಈ ಮರಣಾಂತಕ ರೇಬೀಸ್ ಕಾಯಿಲೆಯಿಂದ ಮೂವರು ರೋಗಿಗಳು ಮಾತ್ರ ಉಳಿದು ಬದುಕಿದ್ದಾರೆ ಇದೊಂದು ವಿಸ್ಮಯದ ಸಂಗತಿ.

1. 1970 ಆರುವರ್ಷದ ಹುಡುಗ ಒಹಿಯೊ ಅಮೆರಿಕದೇಶ ಬಾವಲಿಯಿಂದ ರೇಬೀಸ್ ಬಂದಿರುವುದು.

2. 1972 45 ವರ್ಷದ ಮಹಿಳೆ. ಅರ್ಜೆಂಟೈನ ದೇಶ ನಾಯಿ ಕಚ್ಚಿದ ನಂತರ ಬಂದ ರೇಬೀಸ್.

**ಸೂಚನೆ :** ಈಕೆ ನಾಯಿ ಕಚ್ಚಿದ ನಂತರ ಅಪೂರ್ಣ ಲಸಿಕೆ ಚಿಕಿತ್ಸೆ ಪಡೆದಿದ್ದಳು.

3. 1977 32 ವರ್ಷದ ವೈದ್ಯಶಾಸ್ತ್ರಜ್ಞ ನ್ಯೂಯಾರ್ಕ್ ಅಮೆರಿಕ ಪ್ರಯೋಗ ಶಾಲೆಯಲ್ಲಿ ರೇಬೀಸ್ ವೈರಸ್, ಸೋಂಕು ತಗುಲಿದ್ದು

**ಸೂಚನೆ :** ಈತ ಮುಂಜಾಗ್ರತೆ ಲಸಿಕೆ ಚಿಕಿತ್ಸೆ ಪಡೆದಿದ್ದನು.

ಈ ಮೇಲಿನ ಮೂರು ರೋಗಿಗಳನ್ನು ಹೊರತು ಪಡಿಸಿದರೆ ಪ್ರಪಂಚದಲ್ಲಿ ಎಲ್ಲೂ ರೇಬೀಸ್ ರೋಗಿಯು ಬದುಕುಳಿದಿಲ್ಲ. ವೈದ್ಯಶಾಸ್ತ್ರದಲ್ಲೂ ಇದಕ್ಕೆ ಯಾವುದೇ ನಿಶ್ಚಿತ ಹಾಗು ವಿಶಿಷ್ಟವಾದ ಗುಣಪಡಿಸುವ ಔಷಧಿಯಿಲ್ಲ. ಈ ಔಷಧವನ್ನು ಕಂಡುಹಿಡಿಯುವ

ವಿಜ್ಞಾನಿಗೆ ನೊಬೆಲ್ ಪಾರಿತೋಷಕ ಲಭ್ಯವಾಗುವುದರಲ್ಲಿ ಸಂದೇಹವೇ ಇಲ್ಲ ಎನ್ನಬಹುದು.

ಈ ಹಿನ್ನಲೆಯಲ್ಲಿ ಇಂತಹ ಒಂದು ಭಯಾನಕ, ಮಾರಕ ರೋಗವನ್ನು ತಡೆಗಟ್ಟುವುದು ಹಾಗು ನಿಯಂತ್ರಿಸುವುದು ಅತಿ ಮುಖ್ಯವಾಗುತ್ತದೆ.

# ೩. ರೋಗ ಪ್ರತಿಬಂಧಕ

ರೇಬೀಸ್ ಶೇಕಡ ನೂರರಷ್ಟು ಮರಣಾಂತಕವಾದರೂ ತಕ್ಕ ಸಮಯದಲ್ಲಿ ಸೂಕ್ತವಾದ ಚಿಕಿತ್ಸೆ ಪಡೆದರೆ ಈ ರೋಗವನ್ನು ತಡೆಗಟ್ಟಬಹುದು. ಸಾಮಾನ್ಯವಾಗಿ ಇದು ಪ್ರಾಣಿಗಳು ಕಚ್ಚುವುದು, ಪರಚುವುದು, ನೆಕ್ಕುವುದು ಇತರೇ ಸಂಪರ್ಕದಿಂದ ಬರುವುದರಿಂದ ಈ ರೋಗ ನಿರೋಧಕ್ಕೆ ಮೂರು ವಿಧಾನಗಳುಂಟು. ಇವುಗಳೆಂದರೆ.

೧. **ಪ್ರಥಮ ಚಿಕಿತ್ಸೆ** (ಮೂರನೇ ಒಂದು ಭಾಗ, ರೋಗ ನಿರೋಧಕದಷ್ಟು ಪರಿಣಾಮಕಾರಿ)

೨. **ರೋಗ ನಿರೋಧಕ ಲಸಿಕೆ** (ಚುಚ್ಚುಮದ್ದು ವ್ಯಾಕ್ಸಿನ್) (ಮೂರನೇ ಒಂದು ಭಾಗ ರೋಗ ನಿರೋಧಕದಷ್ಟು ಪರಿಣಾಮಕಾರಿ)

೩. **ರೋಗ ನಿರೋಧಕ ಮೇದಸ್ಸು** (ಸೀರಂ) (ಮೂರನೇ ಒಂದು ಭಾಗ ರೋಗ ನಿರೋಧಕದಷ್ಟು ಪರಿಣಾಮಕಾರಿ)

## ೩.೧ ಪ್ರಥಮ ಚಿಕಿತ್ಸೆ

ರೇಬೀಸ್ ರೋಗ ಪೀಡಿತ ಪ್ರಾಣಿಕಚ್ಚಿದರೆ, ಪರಚಿದರೆ, ನೆಕ್ಕಿದರೆ ಅವಶ್ಯಕವಾಗಿ ಕೂಡಲೇ ಕೈಗೊಳ್ಳಬೇಕಾದ ಕ್ರಮವೆಂದರೆ.

–ಸೋಪನ್ನು ಉಪಯೋಗಿಸಿ ಹೆಚ್ಚು ರಭಸವಾದ/ಸಮೃದ್ಧ ನೀರಿನಿಂದ ಗಾಯವನ್ನು ಚೆನ್ನಾಗಿ ತೊಳೆಯಬೇಕು. (ಯಾವ ಸಾಬೂನನ್ನಾದರೂ ಬಳಸಬಹುದು) ಇದರಿಂದ ಗಾಯದಲ್ಲಿರುವ ರೇಬೀಸ್ ನಂಜಿರುವ ನಾಯಿಯ ಜೊಲ್ಲು ಸಂಪೂರ್ಣವಾಗಿ ತೊಳೆದು ಹೋಗಬೇಕು. ಹಾಗು ಸೋಪಿನಿಂದ ರೇಬೀಸ್ ವಿಷಾಣು ನಿಷ್ಕ್ರಿಯಗೊಂಡು ರೇಬೀಸ್ ಗಂಡಾಂತರ ಅತಿ ಕಡಿಮೆಯಾಗುತ್ತದೆ. ನಂತರ ಡೆಟಾಲ್ ಅಥವ ಟಿಂಕ್ಚರ್ ಅಯೋಡಿನ್, ಸ್ಯಾವಲಾನ್ ಅಥವ ಯಾವುದೇ ರೋಗಾಣು ನಾಶಕವನ್ನು ಹತ್ತಿಯಿಂದ ಗಾಯಕ್ಕೆ ಹಚ್ಚಬೇಕು. ಇದರಿಂದ ಕಾರಣಾಂತರದಿಂದ ಏನಾದರೂ ರೇಬೀಸ್ ವಿಷಾಣು ನಿಷ್ಕ್ರಿಯಗೊಳ್ಳದೆ ಉಳಿದಿದ್ದರೆ ಅದು ನಾಶವಾಗುತ್ತದೆ.



ಚಿತ್ರ 3.1 ಗಾಯವನ್ನು ಸೋಪು ಹಾಗೂ ಸಮೃದ್ಧ ನೀರಿನಿಂದ ತೊಳೆಯಬೇಕು



ಚಿತ್ರ 3.2 ಗಾಯಕ್ಕೆ ರೋಗನಾಶಕ ಔಷಧವನ್ನು ಹಚ್ಚಬೇಕು



ಚಿತ್ರ 3.3 ಗಾಯಕ್ಕೆ ಪಟ್ಟಿಯನ್ನು ಕಟ್ಟಬಾರದು.



ಚಿತ್ರ 3.4 ಗಾಯವನ್ನು ವೈದ್ಯರು ಹೊಲಿಯಬಾರದು

–ಗಾಯಕ್ಕೆ ಪಟ್ಟಿ/ಬ್ಯಾಂಡೇಜ್ ಕಟ್ಟಬಾರದು. ಉಗ್ರ ಆಮ್ಲ ಆ್ಯಸಿಡ್ ಕಳ್ಳಿಹಾಲು, ಬಿಸಿತ್ರಾಮದ ನಾಣ್ಯ. ಅರಿಶಿನ, ಮೆಣಸಿನಪುಡಿ, ಎಲೆಯರಸ ಇವು ಯಾವುದನ್ನೂ ಹಾಕಬಾರದು. ಯಾವುದೇ ನಾಟಿ ಔಷಧಿ ಹಾಕಬಾರದು.

ಮೇಲೆ ಹೇಳಿದ ವಸ್ತುಗಳನ್ನು ಹಚ್ಚುವುದರಿಂದ ಅವು ಗಾಯದಲ್ಲಿ ಚುರುಕು ಉಂಟುಮಾಡಿ ರೇಬೀಸ್ ವೈರಸ್ ವೃದ್ಧಿಗೊಂಡು ನರಗಳ ಕಡೆ ಚಲಿಸಿ ಸೋಂಕು ಉಂಟುಮಾಡಿ ರೇಬೀಸ್ ಬರುವ ಸಂಭವ ಹೆಚ್ಚಾಗುತ್ತದೆ. – ಹತ್ತಿರದ ಆಸ್ಪತ್ರೆ/ಆರೋಗ್ಯ ಕೇಂದ್ರಕ್ಕೆ ವೈದ್ಯರ ಸಲಹೆ ಪಡೆಯಲು ಕೂಡಲೇ ಧಾವಿಸಬೇಕು.

– ನಾಯಿಕಚ್ಚಿದ ನಂತರ ತಡಮಾಡಿದಷ್ಟು ರೇಬೀಸ್ ಕಾಯಿಲೆಯ ಗಂಡಾಂತರ ಜಾಸ್ತಿಯಾಗುತ್ತದೆ.

## ೩.೨ ರೋಗ ನಿರೋಧಕ ಲಸಿಕೆಯ ಚಿಕಿತ್ಸೆ

ರೇಬೀಸ್ ವೈರಸ್ ವಿಷಾಣುಗಳು, ತಮ್ಮ ಗುರಿಯಾದ ಮಿದುಳಿನ ಜೀವಕೋಶಗಳನ್ನು ಸೇರಿದ ಬಳಿಕ, ಯಾವುದೇ ಲಸಿಕೆಯು ವ್ಯಕ್ತಿಗೆ ಯಾವುದೇ ಸಹಾಯ ಮಾಡಲಾರದು. ಆದುದರಿಂದ ರೇಬೀಸ್‌ಗೆ, ತುತ್ತಾದ ಪ್ರಾಣಿಯ ಕಡಿತಕ್ಕೊಳಗಾದ ವ್ಯಕ್ತಿ, ಕೂಡಲೆ ಲಸಿಕೆ ಚಿಕಿತ್ಸೆ ಪಡೆಯುವುದು ಅತಿ ಅವಶ್ಯಕ. ಇಲ್ಲಿ ಸಮಯ ವ್ಯರ್ಥವಾದಷ್ಟು ರೇಬೀಸ್ ಸೋಂಕು ತಗಲುವ ಸಾಧ್ಯತೆ ಹೆಚ್ಚು ಹಾಗು ಪ್ರಾಣಕ್ಕೆ ಅಪಾಯ. ಏಕೆಂದರೆ ಒಮ್ಮೆ ತಮ್ಮ ತಾಣವಾದ ನರಮಂಡಲ ಸೇರಿದ ವೈರಸ್‌ಗಳು, ಆ ಬಳಿಕ ಯಾವುದೇ ರೀತಿಯ ರೋಗ ರಕ್ಷಣಾವಸ್ತುಗಳಿಗೂ ಜಗ್ಗುವುದಿಲ್ಲ. ಆದುದರಿಂದ ಅದಕ್ಕೆ ಮೊದಲೇ ಲಸಿಕೆಯನ್ನು ಕ್ರಮಬದ್ಧವಾಗಿ ಪಡೆದು ದೇಹದಲ್ಲಿ ವೈರಸ್‌ಗಳ ವಿರುದ್ಧ ಹೋರಾಡುವ ರೋಗ ನಿರೋಧಕ ಶಕ್ತಿಯನ್ನು ಹಾಗು ಮುಖ್ಯವಾಗಿ ರೋಗ ರಕ್ಷಣಾವಸ್ತುವನ್ನು ಹೊಂದಿರಬೇಕು.

## (ಅ) ನಾಯಿ/ಇತರೆ ಪ್ರಾಣಿಗಳು ಕಚ್ಚಿದ ಬಗ್ಗೆ ವಿವರ

ಇಂದು ಭಾರತದಲ್ಲಿ ಕೆಲವು ಪ್ರಾಣಿಗಳು ಮಾತ್ರ ರೇಬೀಸ್ ರೋಗವನ್ನು ಮನುಷ್ಯನಿಗೆ ಹರಡುವುದರಿಂದ ಈ ಪ್ರಾಣಿಗಳು, ಮನುಷ್ಯನನ್ನು ಕಚ್ಚಿದರೆ ಮಾತ್ರ ರೋಗ ನಿರೋಧಕ ಲಸಿಕೆ ಚಿಕಿತ್ಸೆ ಕೊಡಬೇಕಾಗುತ್ತದೆ

**ರೋಗ ನಿರೋಧಕ ಲಸಿಕೆ ಚಿಕಿತ್ಸೆ ಹಾಗು ಕಚ್ಚುವ ಪ್ರಾಣಿಯ ವಿವರ**

| ಲಸಿಕೆ ನೀಡಲೇ ಬೇಕು | ಲಸಿಕೆ ನೀಡುವ ಮೊದಲು ಕಚ್ಚಿರುವ ಪ್ರಾಣಿಯ ವಿವರಗಳುಬೇಕು | ಲಸಿಕೆ ನೀಡುವ ಅವಶ್ಯಕತೆ ಇಲ್ಲ |
|---|---|---|
| ನಾಯಿ (ಸಾಕಿದ ನಾಯಿ ಲಸಿಕೆ ಪಡೆದಿದ್ದರೂ ಕೂಡ) | ಕುದುರೆ, ಒಂಟೆ | ಅಳಿಲು |
| ಬೆಕ್ಕು ಕೋತಿ | ಹಸು, | ಇಲಿ |
| ಕಾಡುಮೃಗಗಳು | ಎಮ್ಮೆ | ಮೊಲ |
| ಮುಂಗುಸಿ,ನರಿ, | ಕತ್ತೆ | ಪಕ್ಷಿಗಳು |
| ತೋಳ ಇತ್ಯಾದಿ | ಮೇಕೆ | |
| | ಹಂದಿ | |
| | ಮನುಷ್ಯ | |

ಇವಲ್ಲದೆ ಬೇರೆ ಯಾವುದೇ ಪ್ರಾಣಿಯು ಕಚ್ಚಿದರೆ, ಲಸಿಕೆ ಕೊಡುವ/ಬಿಡುವ ನಿರ್ಧಾರವನ್ನು ವೈದ್ಯರಿಗೆ ಬಿಡಬೇಕು.

## (ಆ) ಗಾಯ ವರ್ಗೀಕರಣ.

ಕಚ್ಚಿದ ಗಾಯದ ವರ್ಗೀಕರಣದ ಮೇರೆಗೆ ರೋಗನಿರೋಧಕ ಲಸಿಕೆ ವಿವರ ಪಟ್ಟಿ ನಿರ್ಧಾರವಾಗುತ್ತದೆ.

ಭಾರತದ ಕೇಂದ್ರೀಯ ಅನುಸಂಧಾನ ಸಂಸ್ಥೆ (ಸೆಂಟ್ರಲ್ ರಿಸರ್ಚ್ ಇನ್ಸ್ಟಿಟ್ಯೂಟ್), ಕಸೌಲಿ, ಹಿಮಾಚಲ ಪ್ರದೇಶದ ಪ್ರಕಾರ ಗಾಯದ ವರ್ಗೀಕರಣ ಹೀಗಿದೆ.

i. **ಮೊದಲನೆ ವರ್ಗ** (ಕಡಿಮೆ ಗಂಡಾಂತರ)

–ಪ್ರಾಣಿಯು ನೆಕ್ಕಿದರೆ ಮಾತ್ರ (ಗಾಯ ಹಾಗೂ ಗೀರುಗಾಯದ ಮೇಲೆ ಹೊರತುಪಡಿಸಿ)

–ಪ್ರಾಣಿಯ ಪರಚುವಿಕೆ, ಬಟ್ಟೆಯ ಮೇಲೆ ಕಚ್ಚಿದ ಗಾಯ, ಗೀರು ಗಾಯ, ಹಾಗು ರಕ್ತ ಬಂದಿರಕೂಡದು.

–ರೇಬೀಸ್‌ನಿಂದ ಸತ್ತ ಹಸುವಿನ ಹಾಲು ಕಾಯಿಸದೆ ಕುಡಿದಿರುವುದು.

–ರೇಬೀಸ್ ರೋಗಿಯ ಶುಶ್ರೂಷೆ ಮಾಡಿರುವುದು.

ii. **ಎರಡನೆ ವರ್ಗ** (ಮಧ್ಯಮ ಗಂಡಾಂತರ)

–ಗಾಯದ ಮೇಲೆ ನೆಕ್ಕುವುದು,

–ಗೀರುಗಾಯ ರಕ್ತ ಬಂದಿರುವುದು,

–ಇತರೇ ಜಾಗಗಳಲ್ಲಿ ಐದು ಕಚ್ಚಿದ ಗಾಯಕ್ಕಿಂತ ಕಡಿಮೆ ಇರುವುದು (ಮುಖ, ತಲೆ, ಕತ್ತು, ಕೈ ಹೊರತುಪಡಿಸಿ)

iii. **ಮೂರನೆ ವರ್ಗ** (ಹೆಚ್ಚುವರಿ ಗಂಡಾಂತರ)

–ಕಚ್ಚಿದ ಗಾಯಗಳು ಐದಕ್ಕಿಂತ ಜಾಸ್ತಿ ಇರುವುದು.

–ಅತಿ ಆಳವಾಗಿ ಅಥವಾ ತೀವ್ರವಾಗಿ ಹರಿದು/ಸಿಗಿದು ಹೋದ ಗಾಯ

–ತಲೆ, ಮುಖ, ಕತ್ತು ಹಾಗು ಕೈಗಳ ಮೇಲೆ ಗಾಯ

–ಕಾಡು ಪ್ರಾಣಿಗಳಿಂದ ಉಂಟಾದ ಗಾಯಗಳು

(ಉದಾ:- ನರಿ, ಮುಂಗುಸಿ, ಇತರೆ ಪ್ರಾಣಿಗಳು)

## ಇ. ರೋಗ ನಿರೋಧಕ ಲಸಿಕಾ ಚಿಕಿತ್ಸೆ ಹಾಗು ವೇಳಾಪಟ್ಟಿ

ನಮ್ಮ ರಾಜ್ಯದಲ್ಲಿ ಸರ್ಕಾರಿ ಆಸ್ಪತ್ರೆ, ಆರೋಗ್ಯ ಕೇಂದ್ರಗಳು, ನಗರ ಪಾಲಿಕೆ ಕೇಂದ್ರಗಳಲ್ಲಿ ದೊರೆಯುವ ಲಸಿಕೆಯು ನರಸತ್ವ ಲಸಿಕೆಯಾಗಿರುತ್ತದೆ. ಇದನ್ನು ಬೆಳಗಾವಿ ಲಸಿಕೆ ಸಂಸ್ಥೆಯು ತಯಾರಿಸಿ ಸರಬರಾಜು ಮಾಡುತ್ತಿದೆ. ಇದರ ಲಸಿಕಾ ವೇಳಾಪಟ್ಟಿ ಹೀಗಿದೆ.

**ಮೊದಲನೇ ವರ್ಗ**

**–ನರಸತ್ವ ಲಸಿಕೆ ಮಾತ್ರ**

2 ಮಿ.ಲಿ x 7 ದಿನಗಳು (ಎಲ್ಲ ವಯಸ್ಸಿನವರಿಗೂ) ಹೊಟ್ಟೆಯ ಚರ್ಮದ ಕೆಳಗೆ ಚುಚ್ಚುಮದ್ದನ್ನು ನೀಡಬೇಕು.

**ಎರಡನೆಯ ವರ್ಗ**

**–ನರಸತ್ವ ಲಸಿಕೆ ಮಾತ್ರ**

i. ವಯಸ್ಕರಿಗೆ (> 30 ಕಿ.ಗ್ರಾಂ ತೂಕ)– 5 ಮಿಲಿ x 14 ದಿನಗಳು. ಹಾಗು ಒಂದು 5 ಮಿಲಿ ವೃದ್ಧಕ ಚುಚ್ಚುಮದ್ದನ್ನು ಮೂರು ವಾರಗಳ ನಂತರ ನೀಡಬೇಕು.

ii. ಮಕ್ಕಳಿಗೆ (< 30 ಕಿ.ಗ್ರಾಂ ತೂಕ)– 2 ಮಿಲಿ x 14

ದಿನಗಳು ಹಾಗು ಒಂದು 2 ಮಿಲಿ ವೃದ್ಧಕ ಗುಟುಕನ್ನು ಮೂರು ವಾರಗಳ ನಂತರ ನೀಡಬೇಕು.

**ಮೂರನೆಯ ವರ್ಗ**

**–ಸರಸತ್ವ ಲಸಿಕೆ ಹಾಗು ಆಂಟಿ ರೇಬೀಸ್ ಮೇದಸ್ಸು**

**ಸರಸತ್ವ ಲಸಿಕೆ.:**

i. (> 30 ಕಿ. ಗ್ರಾಂ ತೂಕ) :– 5 ಮಿಲಿ x 14 ದಿನಗಳು. ಹಾಗು ಎರಡು 5 ಮಿಲೀ ವೃದ್ಧಕ ಚುಚ್ಚುಮದ್ದು,

ಮೊದಲನೆಯದು – ಒಂದು ವಾರದ ನಂತರ

ಎರಡನೆಯದು – ಮೂರು ವಾರದ ನಂತರ (ಮೊದಲನೆ ೧೪ ಚುಚ್ಚುಮದ್ದು ಸರಣಿಯ ನಂತರ)

ii. < 30 ಕಿ.ಗ್ರಾಂ. ತೂಕ – 2ಮಿಲಿ x 14 ದಿನಗಳು. ಎರಡು ಮಿ.ಲೀ ವೃದ್ಧಕ ಚುಚ್ಚುಮದ್ದು,

ಮೊದಲನೆಯದು– ಒಂದು ವಾರದ ನಂತರ

ಎರಡನೆಯದು – ಮೂರು ವಾರದ ನಂತರ

## ಮೇದಸ್ಸು

ಪ್ರತಿ ಕಿ.ಗ್ರಾಂ ದೇಹ ತೂಕಕ್ಕೆ 40 ಅಂತಾರಾಷ್ಟ್ರೀಯ ಮಾನಕಗಳಂತೆ ಔಷಧಿಯನ್ನು ನೀಡಬೇಕು. (ಸುಮಾರು 2-10 ಮಿ.ಲೀ ಕೊಡಬೇಕಾಗುತ್ತದೆ.) ಇಲ್ಲಿ ರೋಗಿಯು ನಾಯಿ ಕಚ್ಚಿದ 24 ಗಂಟೆಯೊಳಗೆ ಬಂದರೆ ಅರ್ಧ ಪ್ರಮಾಣವನ್ನು ಗಾಯಕ್ಕೆ ಲೇಪಿಸಿ/ಚುಚ್ಚಿ ಕೊಡಬೇಕು. ಉಳಿದ ಅರ್ಧ ಭಾಗವನ್ನು ಸ್ನಾಯು ಖಂಡದಲ್ಲಿ ಪೃಷ್ಟದಲ್ಲಿ ನೀಡಬೇಕು.

ಆದರೆ ರೋಗಿಯು ನಾಯಿ ಕಚ್ಚಿದ ಇಪ್ಪತ್ತನಾಲ್ಕು ಗಂಟೆಯ ಮೇಲೆ ಹಾಗು ಏಳು ದಿನಗಳ ಒಳಗೆ ಬಂದರೆ, ಪೂರ್ತಿ ಪ್ರಮಾಣವನ್ನು ಸ್ನಾಯು ಖಂಡದಲ್ಲಿ ಪೃಷ್ಟದಲ್ಲಿ ಚುಚ್ಚುಮದ್ದಾಗಿ ನೀಡಬೇಕಾಗುತ್ತದೆ.

ಆದರೆ ಈ ಮೇದಸ್ಸು ಎಲ್ಲಾ ಆಸ್ಪತ್ರೆಗಳಲ್ಲೂ ಆರೋಗ್ಯ ಕೇಂದ್ರಗಳಲ್ಲೂ ಲಭ್ಯವಿಲ್ಲದಿರುವುದರಿಂದ ಇಂದು ಬಹುತೇಕ ಹೆಚ್ಚಿನ ಗಂಡಾಂತರ ರೋಗಿಗಳಿಗೆ ಈ ಪ್ರಾಣ ಉಳಿಸುವ ಔಷಧ ದೊರಕದೆ ಅವರು ರೇಬೀಸ್ ಕಾಯಿಲೆಗೆ ತುತ್ತಾಗುತ್ತಾರೆ.

ಇದಲ್ಲದೆ ನಮ್ಮ ರಾಜ್ಯದಲ್ಲಿ ಕೆಲವು ಕೇಂದ್ರಗಳಲ್ಲಿ ಭಾರತೀಯ ಪ್ಯಾಶ್ಚರ್ ಸಂಸ್ಥೆ, ಕೂನೂರು, ತಮಿಳುನಾಡಿನಲ್ಲಿ ತಯಾರಿಸಿರುವ ಲಸಿಕೆಯನ್ನು ಉಪಯೋಗಿಸಲಾಗುತ್ತಿದೆ. ಇದರ ವೇಳಾಪಟ್ಟಿಯಲ್ಲಿ ಸ್ವಲ್ಪ ವ್ಯತ್ಯಾಸವಿದೆ.



ಚಿತ್ರ 3.5 ನರಸತ್ತ ಲಸಿಕೆಗಳು: ಬೆಳಗಾಂ ಲಸಿಕೆ(ಎಡಕ್ಕೆ), ಕೂನೂರು ಲಸಿಕೆ(ಬಲಕ್ಕೆ)

**೩.೩ ಭಾರತೀಯ ಪ್ಯಾಶ್ಚರ್ ಸಂಸ್ಥೆ, ಕೂನೂರು : ಲಸಿಕಾ ವೇಳಾಪಟ್ಟಿ**

| | ಕೂನೂರು ಲಸಿಕೆಯಪ್ರಮಾಣ | | |
|---|---|---|---|
| ಗಾಯದ ವರ್ಗ (ಕಸೌಲಿ ಸಂಸ್ಥೆಯಂತೆ) | ವಯಸ್ಕರು | ಮಕ್ಕಳು | ವೇಳಾಪಟ್ಟಿ |
| 1. | 2 ಮಿಲೀ | 1 ಮಿಲೀ | 7 ದಿನಗಳು |
| 2. | 3 ಮಿಲೀ | 3 ಮಿಲೀ | 10 ದಿನಗಳು |
| 3. | 5 ಮಿಲೀ | 3 ಮಿಲೀ | 10 ದಿನಗಳು |

## ೩.೨ ರೇಬೀಸ್

೩.೩.೧ ಇಲ್ಲಿ ವೃದ್ಧಕ (ಬುಸ್ಟರ್) ಚುಚ್ಚು ಮದ್ದು ಇರುವುದಿಲ್ಲ.

೩.೩.೨ ಮೂರನೆ ವರ್ಗದ ಗಾಯದಲ್ಲಿ ರೇಬೀಸ್ ಮೇದಸ್ಸು ಹಿಂದೆ ವಿವರಿಸಿದ ರೀತಿಯಲ್ಲಿ ನೀಡಬೇಕು.

**೩.೩.೩ ಲಸಿಕೆ ನೀಡುವ ಸ್ಥಳ**

ನರಸತ್ವ ಲಸಿಕೆಯನ್ನು ಸರ್ವೆ ಸಾಮಾನ್ಯವಾಗಿ ಹೊಕ್ಕಳ ಸುತ್ತ ಹೊಟ್ಟೆಯಲ್ಲಿ ಗುರುತಿಸಿದ ಜಾಗದಲ್ಲಿ ಚರ್ಮವನ್ನು ಎರಡು ಬೆರಳಿನಿಂದ ಮೇಲೆಳೆದು ಚರ್ಮದಡಿಯಲ್ಲಿ ಕೊಡಲಾಗುತ್ತದೆ.

ಪ್ರತಿ ದಿನ ಈ ಲಸಿಕೆಯನ್ನು ಕೊಡುವುದರಿಂದ ಬೇರೆ ಬೇರೆ ಜಾಗಗಳಲ್ಲಿ ಮೇಲೆ ತಿಳಿಸಿದಂತೆ ನೀಡಬೇಕಾಗುತ್ತದೆ. ಗರ್ಭಿಣಿ ಸ್ತ್ರೀಯರಲ್ಲಿ ಇದನ್ನು ಬೆನ್ನಿನಲ್ಲಿ ಅಥವಾ ತೊಡೆಯಲ್ಲಿ ಕೊಡಲಾಗುತ್ತದೆ. ಪ್ರತಿ ರೋಗಿಗೂ ಪ್ರತ್ಯೇಕವಾಗಿ ಸಂಸ್ಕರಿಸಿದ ಸೂಜಿಯನ್ನು ಉಪಯೋಗಿಸಬೇಕು. ಒಮ್ಮೆ ಉಪಯೋಗಿಸಿ, ಬಿಸಾಡುವ ಸಿರಿಂಜ್ ಮತ್ತು ಸೂಜಿಯನ್ನು ಉಪಯೋಗಿಸುವುದು, ಅತಿ ಸೂಕ್ತವಾದದ್ದು.

೩.೩.೪ ಕಚ್ಚಿದ ಪ್ರಾಣಿಯನ್ನು **(ನಾಯಿ ಹಾಗು ಬೆಕ್ಕಿನಲ್ಲಿ ಮಾತ್ರ)** ಹತ್ತು ದಿನಗಳಕಾಲ ಗಮನಿಸಬೇಕು.

ಕಚ್ಚಿದ ಪ್ರಾಣಿಯನ್ನು ಕೊಲ್ಲುವುದಾಗಲೀ ಓಡಿಸುವುದಾಗಲೀ ಮಾಡಬಾರದು. ಈ ಪ್ರಾಣಿ ಲಭ್ಯವಿದ್ದರೆ ಹತ್ತು ದಿನಗಳ ಕಾಲ ಕೆಳಗೆ ನಮೂದಿಸಿರುವ ಲಕ್ಷಣಗಳನ್ನು ಗಮನಿಸಬೇಕು.

ಅ. ಪ್ರಾಣಿಯ ಸಾಮಾನ್ಯ ವರ್ತನೆಯಲ್ಲಿ ಬದಲಾವಣೆ ಅಂದರೆ ಅನಗತ್ಯವಾಗಿ ಕೋಪಗೊಳ್ಳುವುದು ಅಥವಾ ಖಿನ್ನತೆಗೊಳ್ಳುವುದು.

ಆ. ಗೊತ್ತು ಗುರಿ ಇಲ್ಲದೇ ಓಡಾಡುವುದು ಹಾಗು ಅನಗತ್ಯವಾಗಿ ಕೋಪಗೊಳ್ಳುವುದು ಅಥವಾ ಕಚ್ಚುವುದು.

ಇ. ಏಕಾಏಕಿ ಮಂಕಾಗಿ ಎಲ್ಲರಿಂದ ದೂರ ಹೋಗಿ ಮೂಲೆ ಸೇರುವುದು.

ಈ. ಹೆಚ್ಚಾಗಿ ಜೊಲ್ಲು ಸುರಿಸುವುದು

ಉ. ಧ್ವನಿಯಲ್ಲಿ ಬದಲಾವಣೆ




ಚಿತ್ರ 3.6 ನರಸತ್ವ ಲಸಿಕೆ ಕೊಡಲು ನಿರ್ಧರಿಸಿದ ಭಾಗಗಳು



ಚಿತ್ರ 3.7 ನರಸತ್ವ ಲಸಿಕೆಯನ್ನು ಚರ್ಮದಡಿಯಲ್ಲಿ ಕೊಡುವ ವಿಧಾನ

೧೧. ಆಹಾರ ದೂರ ಮಾಡುವುದು ಹಾಗು ಕಲ್ಲು, ಪೇಪರ್, ಗಾಜಿನ ಚೂರು ಇತ್ಯಾದಿ ಅನಗತ್ಯ ವಸ್ತುಗಳನ್ನು ತಿನ್ನುವುದು.

೧೨. ಪ್ರಾಣಿಯ ಸಾವು.

ಮೇಲೆ ತಿಳಿಸಿದ ಯಾವುದೇ ಲಕ್ಷಣ ಕಂಡು ಬಂದಲ್ಲಿ ಸ್ಥಳೀಯ ವೈದ್ಯರಿಗೆ ತಿಳಿಸಬೇಕು, ಹಾಗು ಪಶು ವೈದ್ಯರನ್ನು ಸಂಪರ್ಕಿಸಬೇಕು.

ನಾಯಿ ಕಚ್ಚಿದ ದಿನದಿಂದಲೇ ಲಸಿಕೆ ಚಿಕಿತ್ಸೆ ಪ್ರಾರಂಭಿಸಿದರೆ ಐದು ದಿನಗಳ ನಂತರ ನಾಯಿ ಆರೋಗ್ಯವಾಗಿದ್ದರೆ ಲಸಿಕೆಯನ್ನು

ನಿಲ್ಲಿಸಬಹುದು. ಆರನೇ ದಿನದಿಂದ ಹತ್ತನೇ ದಿನದವರೆಗೆ ನಾಯಿ ಆರೋಗ್ಯವಾಗಿದ್ದರೆ ಮುಂದಿನ ಉಳಿದ ಲಸಿಕೆ (6 ರಿಂದ, 10-14) ತೆಗೆದುಕೊಳ್ಳುವ ಅವಶ್ಯಕತೆಯಿಲ್ಲ. ಏಕೆಂದರೆ ನಾಯಿಗೆ ರೇಬೀಸ್ ಕಾಯಿಲೆಯಿದ್ದರೆ ಐದು ದಿನದೊಳಗೆ ಅದರಲ್ಲಿ ಮೇಲೆ ನಮೂದಿಸಿದ ರೇಬೀಸ್ ಕಾಯಿಲೆ ಲಕ್ಷಣಗಳು ಕಂಡುಬರುತ್ತವೆ, ಹಾಗು ಲಸಿಕಾ ಚಿಕಿತ್ಸೆ ಮುಂದುವರೆಸಬೇಕಾಗುತ್ತದೆ.

**೩.೩.೫ ಲಸಿಕೆ ಪಡೆಯುತ್ತಿರುವ ಸಮಯದಲ್ಲಿ ರೋಗಿಯು ಬಗ್ಗೆ ಎಚ್ಚರಿಕೆ**

- ವೈದ್ಯರು ಹೇಳುವ ಮೇರೆಗೆ ಪ್ರತಿದಿನ ತಪ್ಪದೆ ಲಸಿಕೆ ಚುಚ್ಚುಮದ್ದನ್ನು ತೆಗೆದುಕೊಳ್ಳಬೇಕು.
- ವೈದ್ಯರು ತಿಳಿಸಿದ ಸಂಖ್ಯೆಯಷ್ಟು ಚುಚ್ಚುಮದ್ದನ್ನು (5 ಅಥವ 7, 10 ಅಥವಾ 14 ಹಾಗೂ 1-2 ವೃದ್ಧಕ ಚುಚ್ಚುಮದ್ದುಗಳು ಇದು ಲಸಿಕೆಯ ಸಂಸ್ಥೆಯನ್ನು ಅವಲಂಬಿಸಿರುತ್ತದೆ.) ಚಾಚು ತಪ್ಪದೆ ತೆಗೆದುಕೊಳ್ಳಬೇಕು.
- ಒಮ್ಮೊಮ್ಮೆ ಚುಚ್ಚುಮದ್ದು ಕೊಟ್ಟ ಜಾಗದಲ್ಲಿ ನವೆ, ನೋವು, ಕೆಂಪಾಗುವಿಕೆ, ಊತ, ಜ್ವರ ಇತ್ಯಾದಿ ಬರಬಹುದು. ಇದನ್ನು ವೈದ್ಯರ ಗಮನಕ್ಕೆ ತಂದು ಸೂಕ್ತ ಶಮನ ಔಷಧಿ ಪಡೆಯಬೇಕೇ ವಿನಃ ರೇಬೀಸ್ ಚುಚ್ಚುಮದ್ದನ್ನು ಮಧ್ಯದಲ್ಲೇ ನಿಲ್ಲಿಸಬಾರದು. ಹಾಗೆ ಮಾಡಿದರೆ ಅಪೂರ್ಣ ಲಸಿಕೆ ಚಿಕಿತ್ಸೆಯಿಂದ ದೇಹದಲ್ಲಿ ಪ್ರತಿರೋಧಕ ಶಕ್ತಿ ಉತ್ಪನ್ನಗೊಳ್ಳದೇ ಕಾಯಿಲೆ ಬಂದು ವ್ಯಕ್ತಿಯು ಸಾಯಬಹುದು.
- ರೇಬೀಸ್ ರೋಗ ನಿರೋಧಕ ಲಸಿಕೆ ಚುಚ್ಚುಮದ್ದನ್ನು ಪಡೆಯುವಾಗ ಹಾಗು ನಂತರ ಒಂದು ತಿಂಗಳವರೆಗೆ ಮದ್ಯಪಾನ ಮಾಡಬಾರದು. ಏಕೆಂದರೆ ಮದ್ಯಪಾನದಿಂದ ರೇಬೀಸ್ ರೋಗ ದೇಹದಲ್ಲಿ ತ್ವರಿತಗತಿಯಲ್ಲಿ ಹೊರಹೊಮ್ಮಬಹುದು ಅಥವಾ ಪಾರ್ಶ್ವವಾಯು ತೊಂದರೆ ಉಂಟಾಗುವ ಸಂಭವವುಂಟು ಅನಾವಶ್ಯಕವಾಗಿ ದೈಹಿಕ ಶ್ರಮ ಅಂದರೆ ಶ್ರಮದ ಕೆಲಸ, ಹೆಚ್ಚು ಭಾರಹೊರುವುದು,

ದೈಹಿಕ ವ್ಯಾಯಾಮ, ಮಕ್ಕಳ ಶಾಲೆಯಲ್ಲಿ ಹೊರಾಂಗಣದಲ್ಲಿ ಕವಾಯತ್ತು/ಕಸರತ್ತು ಇತ್ಯಾದಿ ಮಾಡಬಾರದು.

- ರಾತ್ರಿ ಸಮಯದಲ್ಲಿ ಹಿತಕರ ನಿದ್ದೆ ಅವಶ್ಯಕ ಹೊತ್ತು ಮೀರಿ ರಾತ್ರಿ ಹೊತ್ತು ಕೆಲಸ ಮಾಡಬಾರದು.
- ರೇಬೀಸ್ ರೋಗ ನಿರೋಧಕ ಲಸಿಕೆ ಪಡೆಯುತ್ತಿರುವ ಸಮಯದಲ್ಲಿ ಇತರೇ ತೊಂದರೆಗಳಿಗೆ ಸ್ವಚಿಕಿತ್ಸೆ/ಸ್ವಯಂ ಔಷದ ಸೇವನೆ ಮಾಡಬಾರದು. ಯಾವುದೇ ಚಿಕಿತ್ಸೆ ಬೇಕಾದಲ್ಲಿ ವೈದ್ಯರನ್ನು ಸಂಪರ್ಕಿಸಬೇಕು.
- ಅತಿ ಖಾರ, ಮಸಾಲೆ ಪದಾರ್ಥ ತಿನ್ನಬಾರದು ಅತಿಯಾಗಿ ಧೂಮಪಾನ ಮಾಡಬಾರದು.

ಕಡೆಯಲ್ಲಿ ರೇಬೀಸ್ ರೋಗನಿರೋಧಕ ಚುಚ್ಚುಮದ್ದನ್ನು ಪಡೆದ ಆರುತಿಂಗಳ ನಂತರ ವೈದ್ಯರನ್ನು ಭೇಟಿ ಮಾಡಿ ಮತ್ತೊಮ್ಮೆ ಸಂಪೂರ್ಣ ಸಲಹೆ ಪಡೆಯುವುದು ಒಳ್ಳೆಯದು.

**೩.೩.೬ ನರಸತ್ವ ಲಸಿಕೆಯಿಂದ ಆಗುವ ತೊಂದರೆಗಳು ಹಾಗು ಅನಾಹುತಗಳು**

ನರಸತ್ವ ಲಸಿಕೆಯಿಂದ 10-20% ರೋಗಿಗಳಲ್ಲಿ ನೋವು, ಊತ, ಜ್ವರ, ನವೆ, ಸುಸ್ತು ಇತರೇ ಸಣ್ಣ ಪುಟ್ಟ ತೊಂದರೆ/ಯಾತನೆ ಉಂಟಾಗುತ್ತದೆ. ಆದರೆ ಈ ಚಿಕಿತ್ಸೆ ರೈಬೀಸ್ ವಿರುದ್ಧ ಜೀವ ಉಳಿಸುವ ವಿಧಾನವಾಗಿರುವುದರಿಂದ ತೆಗೆದುಕೊಳ್ಳದೇ ವಿಧಿಯಿಲ್ಲ.

ಆದರೆ 1-2% ರೋಗಿಗಳಲ್ಲಿ ಒಮ್ಮೊಮ್ಮೆ ಅತಿ ತೊಂದರೆಯಾಗುವ ಸಾಧ್ಯತೆಯುಂಟು. ಹಾಗು 5000-10,000 ಚಿಕಿತ್ಸೆ ಪಡೆಯುವವರಲ್ಲಿ ಒಬ್ಬರಿಗೆ ಲಸಿಕೆ ದುಷ್ಪರಿಣಾಮದಿಂದಲೇ ನಿಶ್ಶಕ್ತಿ, ಬಳಲಿಕೆ, ಸ್ನಾಯುಗಳ ನಿಶ್ಶಕ್ತಿ, ಸ್ವಾಧೀನ ಕಡಿಮೆಯಾಗುವುದು ಆಗಬಹುದು ಹಾಗು ಲಕ್ವ ಹೊಡೆಯಬಹುದು. ಇದು ಲಸಿಕೆಯಲ್ಲಿ ಅತಿ ಸಣ್ಣ ಪ್ರಮಾಣದಲ್ಲಿ ಉಳಿದಿರುವ ಲಸಿಕೆ ತಯಾರಿಕೆಗೆ ಉಪಯೋಗಿಸಿದ ಕುರಿಯ ಮಿದುಳಿನ ಅಂಶದಿಂದ ಉಂಟಾಗುತ್ತದೆ. ಈ ನರಸತ್ವ ಲಸಿಕೆಯನ್ನು ಎಷ್ಟೇ

ಶುದ್ಧೀಕರಿಸಲು ಪ್ರಯತ್ನಿಸಿದರೂ ಸಂಪೂರ್ಣ ಶುದ್ಧತೆ ಸಾಧ್ಯವಾಗದೆ ಈ ಮೇಲ್ಕಂಡ ದುಷ್ಪರಿಣಾಮಗಳಿಗೆ ಕಾರಣವಾಗುತ್ತದೆ. ಇದಲ್ಲದೆ ಈ ಲಸಿಕೆಯು ಶೇಕಡ 70-90ರಷ್ಟು ಭಾಗ ರೇಬೀಸ್ ವಿರುದ್ಧ ರಕ್ಷಣೆ ನೀಡುವ ಶಕ್ತಿ ಹೊಂದಿದ್ದು ಈ ಲಸಿಕೆಯನ್ನು ವಿಶ್ವ ಆರೋಗ್ಯ ಸಂಸ್ಥೆಯು ನಿಷೇಧಿಸಬೇಕೆಂದು ಶಿಫಾರಸ್ಸು ಮಾಡಿದೆ. ಆದುದರಿಂದ ನರಸತ್ವ ಲಸಿಕೆಯು ಈಗ ಯಾವುದೇ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ಉಪಯೋಗದಲ್ಲಿಲ್ಲ. ಹಾಗು ಸಂಪೂರ್ಣ ನಿಷೇಧಿಸಲಾಗಿದೆ. ಇಂದು ಕೆಲವು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳು ಕೂಡ ನರಸತ್ವ ಲಸಿಕೆಯನ್ನು ನಿಷೇಧಿಸಿ ಆಧುನಿಕ ಅಂಗಸತ್ವ ಕೃಷಿ ಲಸಿಕೆಗಳ ಉತ್ಪನ್ನ ಹಾಗು ಉಪಯೋಗದ ಕ್ರಮಗಳನ್ನು ಕೈಗೊಂಡಿವೆ.

ನರಸತ್ವ ಲಸಿಕೆಯ ಅತಿ ದುಷ್ಪರಿಣಾಮವಾದ ನರಹೀನತೆ ಇತ್ಯಾದಿ ಸಾಮಾನ್ಯವಾಗಿ ರೋಗಿಗಳಲ್ಲಿ 5-7 ಲಸಿಕೆ ಪಡೆದ ನಂತರ ಕಾಣಿಸಿಕೊಳ್ಳುತ್ತವೆ. ಅಂತಹ ಸೂಚನೆಗಳಿಗಾಗಿ ವೈದ್ಯರು ಸಾಮಾನ್ಯವಾಗಿ ರೋಗಿಯು ಪ್ರತಿದಿನ ಲಸಿಕೆಗಾಗಿ ಬಂದಾಗ ಮುನ್ನೆಚ್ಚರಿಕೆ ಪರೀಕ್ಷೆ ಮಾಡಿ ಕೊಂಡರೆ ಇಲ್ಲದಿರುವುದನ್ನು ಖಚಿತಪಡಿಸಿಕೊಳ್ಳುತ್ತಾರೆ. ಒಮ್ಮೊಮ್ಮೆ ಆ ಲಕ್ಷಣಗಳು ಕಂಡು ಬಂದರೆ ತಕ್ಷಣ ನರಸತ್ವ ಲಸಿಕೆಯನ್ನು ನಿಲ್ಲಿಸಿ ಆಧುನಿಕ ಕೃಷಿ ಲಸಿಕೆಯನ್ನು ಶುರು ಮಾಡುತ್ತಾರೆ. ಹಾಗು ನರಹೀನತೆಗೆ ಸೂಕ್ತ ಚಿಕಿತ್ಸೆ ನೀಡುತ್ತಾರೆ. ಆದರೆ ಇಲ್ಲಿ ರೇಬೀಸ್ ಗಂಡಾಂತರವಿದೆಯೋ ಅಲ್ಲಿ ಲಸಿಕೆ ಚಿಕಿತ್ಸೆಯನ್ನು ನಿಲ್ಲಿಸಲು ಸಾಧ್ಯವಿಲ್ಲ.

## ೩.೪ ಆಧುನಿಕ ಅಂಗಸತ್ವ ಕೃಷಿ ಲಸಿಕೆಗಳು

1885ರಲ್ಲಿ ಲೂಯಿ ಪಾಶ್ಚರ್‌ರವರು ಪ್ರಪ್ರಥಮವಾಗಿ ಮೊಲದ ಮೆದುಳಿನಿಂದ ನರಸತ್ವ ಲಸಿಕೆಯನ್ನು ತಯಾರಿಸಿದರು. ನಂತರ 1911ರಲ್ಲಿ ಡೇವಿಡ್ ಸೆಂಪಲ್‌ರವರು ಭಾರತದಲ್ಲಿ ಕಸೌಲಿ ಸಂಸ್ಥೆಯಲ್ಲಿ ಮೊದಲ ಬಾರಿಗೆ ಕುರಿ ಮಿದುಳಿನಿಂದ ರೇಬೀಸ್ ಲಸಿಕೆ ತಯಾರಿಸಿದರು. ಇದೇ ಲಸಿಕೆಯು (ಸ್ವಲ್ಪ ಬದಲಾವಣೆಯೊಂದಿಗೆ) ಇಂದಿಗೂ ಭಾರತದಲ್ಲಿ ಹಳೆ ಪದ್ಧತಿಯಂತೆ ಹಲವು ಸರ್ಕಾರಿ ಹಾಗು ನಗರಪಾಲಿಕೆ ಆರೋಗ್ಯ ಕೇಂದ್ರಗಳಲ್ಲಿ ಉಚಿತವಾಗಿ ಲಭ್ಯವಿದೆ.




ಚಿತ್ರ 3.8 ಆಧುನಿಕ ಅಂಗಸತ್ವ ಕೃಷಿಲಸಿಕೆಗಳು ವಿರೋರಾಬ್(ಮೇಲೆ), ರಬೀಪ್ಯುರ್(ಕೆಳಗಡೆ ಎಡಕ್ಕೆ), ಹೆಚ್.ಡಿ.ಸಿ.ವಿ. ಲಸಿಕೆ (ಕೆಳಗಡೆ ಬಲಕ್ಕೆ).

ಆದರೆ ಇನ್ನು ಉತ್ತಮ, ಸುರಕ್ಷಿತ, ಹಾಗು ರಕ್ಷಣಾತ್ಮಕ ಲಸಿಕೆಗಳನ್ನು ಮುಂದೆ ಬಹಳ ಪ್ರಯತ್ನಗಳಿಂದ ತಯಾರಿಸಲಾಯಿತು. ಇವುಗಳನ್ನು ಅಂಗಸತ್ವ ಕೃಷಿ ಲಸಿಕೆಗಳೆಂದು ಕರೆಯುತ್ತಾರೆ.

**ವಿವಿಧ ರೇಬೀಸ್ ಲಸಿಕೆಗಳ ಸಮಯಾಂತರ ಬೆಳವಣಿಗೆ ಹಾಗು ವಿವರ.**

| ವರ್ಷ | ಲಸಿಕೆ ತಯಾರಿಸಿದವರು ಹಾಗು ದೇಶ | ತಯಾರಿಸಿದ ವಿಧಾನ | ಭಾರತದಲ್ಲಿ ಲಭ್ಯ |
|---|---|---|---|
| 1885 | ಲೂಯಿ ಪ್ಯಾಶ್ಚರ್ ಫ್ರಾನ್ಸ್ | ಮೊಲದ ಬೆನ್ನುಹುರಿ | ಈ ಮೊಲದಲಸಿಕೆಯು ಇಂದು ವಿಶ್ವದೆಲ್ಲೆಲ್ಲೂ ಬಳಕೆಯಲ್ಲಿಲ್ಲ. |
| 911 | ಡೇವಿಡ್ ಸೆಂಪಲ್ ಭಾರತ | ಕುರಿಯ ಮಿದುಳು | ಸರ್ಕಾರಿ ಹಾಗು ನಗರ ಪಾಲಿಕೆ ಆಸ್ಪತ್ರೆಗಳಲ್ಲಿ ಉಚಿತವಾಗಿ ಲಭ್ಯವಿದೆ. |

| | | | |
|---|---|---|---|
| 1955 | ಫ್ಯೂಜಲಿ, ಚಿಲಿದೇಶ | ಮರಿಇಲಿ ಮಿದುಳು | ಇಲ್ಲ |
| 1958 | ಕಿಸ್‌ಲಿಂಗ್ | ಮರಿಹೆಗ್ಗಣದಂತಹ ಪ್ರಾಣಿಯ ಮೂತ್ರಜನಕಾಂಗ | ಇಲ್ಲ |
| 1964 | ವಿಕ್ಟರ್ (ವಿಸ್ಟಾರ್ ಸಂಸ್ಥೆ, ಅಮೆರಿಕ ಹಾಗು ಮರಿಯೋ ಸಂಸ್ಥೆ, ಫ್ರಾನ್ಸ್) | ಮನುಷ್ಯನ ಶ್ವಾಸಕೋಶದ ಜೀವಕಣ | ಹೆಚ್.ಡಿ.ಸಿ.ವಿ ಎಂದು ಮಾರುಕಟ್ಟೆಯಲ್ಲಿ ಲಭ್ಯವಿದೆ. |
| 1965 | ಕುಂಡೊ, ಜಪಾನ್ | ಕೋಳಿ ಭ್ರೂಣ ಜೀವಕೋಶ | 'ರಬೀಪುರ್' ಎಂದು ಮಾರುಕಟ್ಟೆಯಲ್ಲಿ ಲಭ್ಯವಿದೆ. |
| 1984 | ಮರಿಯೋ ಸಂಸ್ಥೆ ಫ್ರಾನ್ಸ್ | ಆಫ್ರಿಕಾದ ಹಸಿರು ಮುಖದ ಕೋತಿಯ ಮೂತ್ರ ಜನಕಾಂಗ | 'ವಿರೋರಾಬ್' ಎಂದು ಮಾರುಕಟ್ಟೆಯಲ್ಲಿ ಲಭ್ಯವಿದೆ. |

ಇಂದು ಭಾರತದಲ್ಲಿ ಮೇಲೆ ವಿವರಿಸಿದಂತೆ ಮೂರು ಬಗೆಯ ಆಧುನಿಕ ಅಂಗಸತ್ವ ಕೃಷಿ ಲಸಿಕೆಗಳು ಮಾರುಕಟ್ಟೆಯಲ್ಲಿ ಲಭ್ಯವಿದೆ.

ಅ. **ಹ್ಯೂಮನ್ ಡಿಪ್ಲಾಯಿಡ್ ಸೆಲ್ ಲಸಿಕೆ:** ಫ್ರಾನ್ಸ್ ದೇಶದಿಂದ ಆಮದು ಮಾಡಿಕೊಳ್ಳಲಾಗುತ್ತಿದೆ. ಇದರ ಒಂದು ಲಸಿಕೆ ಗುಟುಕು ಬೆಲೆ 630 ರೂಪಾಯಿ. ಇದು ಪೂನದಲ್ಲಿರುವ ಭಾರತೀಯ ಸೀರಮ್ ಸಂಸ್ಥೆ ಎಂಬ ಖಾಸಗಿ ಸಂಸ್ಥೆ ಆಮದು ಮಾಡುಕೊಂಡು ಮಾರುತ್ತಿದೆ.

ಆ. **ಶುದ್ಧ ಗೊಳಿಸಿದ ಕೋಳಿ ಭ್ರೂಣ ಜೀವಕೋಶ ಲಸಿಕೆ:** (ಪಿ.ಸಿ.ಇ.ಸಿ) ಇದನ್ನು ಮೊದಲು ಜರ್ಮನಿಯಿಂದ ಆಮದು ಮಾಡಿಕೊಳ್ಳಲಾಗುತ್ತಿತ್ತು. ಇತ್ತೀಚೆಗೆ ಗುಜರಾತಿನಲ್ಲಿ ಹೆಕ್ಸಟ್ ಇಂಡಿಯ ಎಂಬ ಖಾಸಗಿ ಔಷಧ ಸಂಸ್ಥೆ ಇದನ್ನು ತಯಾರಿಸಿ ಹಾಗು ಮಾರುಕಟ್ಟೆಯಲ್ಲಿ "ರಬಿಪುರ್" ಎಂಬ ಹೆಸರಿನಿಂದ ಲಭ್ಯವಿದೆ. ಇದರ ಒಂದು ಲಸಿಕೆಯ ಗುಟುಕಿನ ಬೆಲೆ 230 ರೂಪಾಯಿ.

೯. **ಶುದ್ಧೀಕರಿಸಿದ ವಿರೋಸೆಲ್ ರೇಬೀಸ್ ಲಸಿಕೆ:** ಇದನ್ನು ಫ್ರಾನ್ಸ್ ದೇಶದಿಂದ ಆಮದು ಮಾಡಿಕೊಳ್ಳಲಾಗುತ್ತಿದೆ. ಇದರ ಒಂದು ಲಸಿಕೆ ಗುಟುಕಿನ ಬೆಲೆ 230 ರೂಪಾಯಿ. ಇದನ್ನು ಪ್ಯಾಶ್ಚರ್ ಮಾರಿಯೋ ಎಂಬ ಖಾಸಗಿ ಅಂತರಾಷ್ಟ್ರೀಯ ಸಂಸ್ಥೆ ಭಾರತಕ್ಕೆ ಆಮದು ಮಾಡಿಕೊಂಡು ಭಾರತದ ಆಲಿಡಾಕ್ ಎನ್ನುವ ಖಾಸಗಿ ಔಷಧ ಸಂಸ್ಥೆಯ ಮೂಲಕ ವಿರೋರಾಬ್ ಲಸಿಕೆ ಎಂಬ ಹೆಸರಿನಿಂದ ಮಾರಾಟವಾಗುತ್ತಿದೆ.

ಈ ಲಸಿಕೆಗಳು ನರಸತ್ವ ಲಸಿಕೆಗಳಿಗಿಂತ ಬಹು ಉತ್ತಮವಾಗಿದ್ದು, ವಿಶ್ವ ಆರೋಗ್ಯ ಸಂಸ್ಥೆಯ ಮಾನ್ಯತೆ ಪಡೆದಿವೆ. ಇವುಗಳು ನರಸತ್ವ ಲಸಿಕೆಗಳಿಗಿಂತ ಹೇಗೆ ಉತ್ತಮವೆಂದರೆ:

i. ಇವುಗಳ ಗುಟುಕು ಬಹಳ ಕಡಿಮೆ 1 ಮಿಲೀ (ವಿರೋರಾಬ್ ಲಸಿಕೆ–0.5 ಮಿಲಿ)

ii. ಇವುಗಳು ಅತಿ ಹೆಚ್ಚು ಶುದ್ಧೀಕರಿಸಿದ ಲಸಿಕೆಗಳು, ಹಾಗು ಇವುಗಳಲ್ಲಿ ನರಸತ್ವ ಇಲ್ಲವಾದ್ದರಿಂದ ಅಪಾಯ ಹಾಗು ತೊಂದರೆಗಳು ಅತಿ ವಿರಳ.



ಚಿತ್ರ 3.9 ತೋಳಿನ ಸ್ನಾಯುವಿನಲ್ಲಿ ಕೈಗೆ ಲಸಿಕೆ ನೀಡುತ್ತಿರುವುದು

iii. ಇವುಗಳಿಂದ ನೋವು, ಊತ, ಹಾಗು ಇತರೇ ತೊಂದರೆಗಳು ಶೇಕಡಾ 1-2 ಗಿಂತ ಕಡಿಮೆ ಎನ್ನಬಹುದು.

iv. ಇವುಗಳನ್ನು ತೋಳಿನ ಸ್ನಾಯುವಿನಲ್ಲಿ ಕೊಡುವುದರಿಂದ ನೋವು ಆಗುವುದೇ ಇಲ್ಲ. (ಸಣ್ಣ ಮಕ್ಕಳಲ್ಲಿ ತೊಡೆಯ ಹೊರಭಾಗದಲ್ಲಿ ಕೊಡಬೇಕು). ಹಾಗು ಮಕ್ಕಳ ಚಿಕಿತ್ಸೆಯಲ್ಲಿ ಇವು ಅತಿ ಸೂಕ್ತ.

v. ಈ ಲಸಿಕೆಗಳನ್ನು ಪ್ರತಿ ದಿನ ನೀಡುವ ಅವಶ್ಯಕತೆ ಇಲ್ಲ. ಇವುಗಳ ವೇಳಾಪಟ್ಟಿ ಹೀಗಿದೆ.

| ದಿನ ವೇಳಾಪಟ್ಟಿ | 0 | 3 | 7 | 14 | 30 |
|---|---|---|---|---|---|
| ಲಸಿಕೆ ಗುಟುಕು | 1 | 2 | 3 | 4 | 5 |

ಇಲ್ಲಿ ಗಮನಿಸಬೇಕಾದುದೇನೆಂದರೆ ದಿನ '೦' ಅಂದರೆ ಮೊದಲು ಲಸಿಕೆ ನೀಡಿದ ದಿನ, ಹಾಗು ಇದು ನಾಯಿ ಕಚ್ಚಿದ ದಿನವಾಗಿರದೆ ಇರಬಹುದು.

ಹೆಚ್ಚುವರಿ ಗಂಡಾಂತರವಿರುವ ರೋಗಿಗಳಿಗೆ ದಿನ 90(3 ತಿಂಗಳು)ರಂದು, ಆರನೇ ಲಸಿಕೆಯನ್ನು ನೀಡಬಹುದು. ಇಲ್ಲದಿದ್ದರೆ ಐದು ಲಸಿಕೆಗಳು ಸಾಕಾಗುತ್ತದೆ.

vi. ಈ ಲಸಿಕೆಗಳು ಶೇಕಡ 99ಕ್ಕೂ ಮೇಲ್ಪಟ್ಟು, ರಕ್ಷಣೆ ನೀಡುತ್ತವೆ. ಹಾಗು ಪರಿಣಾಮಕಾರಿಯಾಗಿರುತ್ತವೆ.

vii. ಈ ಲಸಿಕೆಗಳ ಮೇಲ್ಕಂಡ ಉತ್ತಮ ಗುಣಮಟ್ಟದಿಂದಾಗಿ ರೇಬೀಸ್ ಅಪಾಯದ ವ್ಯಕ್ತಿಗಳಿಗೆ ಪ್ರಾಣಿಗಳು ಕಚ್ಚುವ ಮೊದಲೇ ಲಸಿಕೆ ನೀಡಿ ಮುಂಜಾಗ್ರತೆ ಲಸಿಕೆ ಸಂರಕ್ಷಣೆ ಪ್ರಯೋಜನ ಪಡೆಯಬಹುದಾಗಿದೆ.

ಈ ಆಧುನಿಕ ಲಸಿಕೆಗಳನ್ನು ನಾಯಿ/ಬೆಕ್ಕು ಕಚ್ಚಿದ ವ್ಯಕ್ತಿಗಳಿಗೆ ನೀಡುವಾಗ ಕಚ್ಚಿದ ನಾಯಿ/ಬೆಕ್ಕುಗಳು ಹತ್ತುದಿನದ ನಂತರ ಆರೋಗ್ಯವಾಗಿದ್ದರೆ 3 ಲಸಿಕೆಗಳನ್ನು ಮಾತ್ರ ನೀಡಿ (ದಿನ 0,3 ಹಾಗು

7) ನಿಲ್ಲಿಸುವ ನಿರ್ಧಾರವನ್ನು ಕೆಲವು ವೈದ್ಯರು ಕೆಲವು ಅತಿ ಕಡಿಮೆ ಗಂಡಾಂತರವಿರುವ ರೋಗಿಗಳಲ್ಲಿ ಸೂಕ್ತವಾಗಿ ತೆಗೆದುಕೊಳ್ಳಬಹುದು. ಇದರಿಂದ ಅನಾವಶ್ಯಕವಾಗಿ ಲಸಿಕೆ ಸ್ವೀಕರಿಸುವಿಕೆ ಹಾಗು ವೃಥಾ ಖರ್ಚುಗಳನ್ನು ತಪ್ಪಿಸಬಹುದು. (ಇನ್ನೆರಡು ಲಸಿಕೆಯಾದ ದಿನ 14 ಹಾಗು 30ರ ಲಸಿಕೆಗಳನ್ನು ತೆಗೆದುಕೊಳ್ಳುವ ಅವಶ್ಯಕತೆ ಇರುವುದಿಲ್ಲ.)

**೩.೫ ರೇಬೀಸ್ ಪ್ರತಿರೋಧಕ ಮೇದಸ್ಸು**

ಇದು ಎರಡು ರೂಪದಲ್ಲಿ ಲಭ್ಯವಿದೆ

ಅ. ಕುದುರೆಯ ಶುದ್ಧೀಕರಿಸಿದ ರೇಬೀಸ್ ಮೇದಸ್ಸು

ಆ. ಮಾನವನ ಶುದ್ಧೀಕರಿಸಿದ ರೇಬೀಸ್ ಮೇದಸ್ಸು

**ಅ. ಕುದುರೆಯಿಂದ ಶುದ್ಧೀಸಿದ ರೇಬೀಸ್ ಮೇದಸ್ಸು**

ಇಮೊಂದು ಜೀವರಕ್ಷಕ ಔಷಧಿ. ಇದು ಇಂದು ಹಿಮಾಚಲ ಪ್ರದೇಶದಲ್ಲಿರುವ ಕಸೌಲಿ ಎಂಬಲ್ಲಿನ ಭಾರತ ಸರ್ಕಾರದ ಕೇಂದ್ರೀಯ ಅನುಸಂಧಾನ ಸಂಸ್ಥೆ, ಎಂಬ ಒಂದೇ ಒಂದು ಸಂಸ್ಥೆಯಲ್ಲಿ ಮಾತ್ರ ತಯಾರಿಸಲಾಗುತ್ತಿದೆ. ಇವನ್ನು ರೇಬೀಸ್ ಲಸಿಕೆ ಪಡೆದ ಆರೋಗ್ಯವಂತ ಕುದುರೆಗಳ ಸ್ವಲ್ಪ ರಕ್ತವನ್ನು ಹೊರತೆಗೆದು, ಆ ರಕ್ತದಿಂದ ಮೇದಸ್ಸನ್ನು ಪ್ರತ್ಯೇಕಿಸಿ, ಅದನ್ನು ಶುದ್ಧೀಕರಿಸಿ ತಯಾರಿಸಲಾಗುತ್ತಿದೆ. ಆದರೆ ವಿಷಾದಕರವೆಂದರೆ ಭಾರತದಲ್ಲಿ ಇದರ ಲಭ್ಯತೆ ಹಾಗೂ ಉಪಯೋಗ ಅತಿ ವಿರಳ. ನಮ್ಮ ಕರ್ನಾಟಕ ರಾಜ್ಯದಲ್ಲಿ ಕೇವಲ ಕೆಲವೇ ಆಸ್ಪತ್ರೆಗಳಲ್ಲಿ ದೊರಕುತ್ತಿದೆ. ಇದಕ್ಕೆ ಮೂಲವಾಗಿ ಎರಡು ಕಾರಣಗಳಿವೆ.

i. ವೈದ್ಯರು ಇದನ್ನು ಬಳಸಲು ಹಿಂಜರಿಯುತ್ತಾರೆ. ಏಕೆಂದರೆ ಇದು ಕುದುರೆಯ ಮೇದಸ್ಸನ್ನು ಶುದ್ಧೀಕರಿಸಿ ತಯಾರಿಸುವುದರಿಂದ ಇದರ ಪೂರ್ವ ಪರೀಕ್ಷೆ ಲಸಿಕೆ ಗುಟುಕನ್ನು ಚರ್ಮದಲ್ಲಿ ನೀಡಿ, ಅದರಲ್ಲಿ ಏನು ತೊಂದರೆ ಕಂಡುಬರದಿದ್ದರೆ, ಒಂದು ಗಂಟೆಯ ನಂತರ ಪೂರ್ಣ ಪ್ರಮಾಣದಲ್ಲಿ ನೀಡಬೇಕು. ಇದಲ್ಲದೆ ಶೇಕಡ 2ರಿಂದ 10ಮಂದಿ ರೋಗಿಗಳಲ್ಲಿ ತೊಂದರೆಗಳು ಆಗಬಹುದು. ಅದನ್ನು ಬೇರೆ ಔಷಧಿಗಳಿಂದ ನಿಯಂತ್ರಿಸಬಹುದು. ವೈದ್ಯರು ಈ ಸನ್ನಿವೇಶಗಳನ್ನು

ಎದುರಿಸಲು ಹಿಂಜರಿಯದೆ ಧೈರ್ಯದಿಂದ ಇದನ್ನು ಬಳಸಬೇಕು. ಏಕೆಂದರೆ ಅತಿ ತೀವ್ರವಾದ ರೇಬೀಸ್ ಗಂಡಾಂತರದ ಗಾಯವಾಗಿದ್ದರೆ ರೇಬೀಸ್ ರೋಗವು ಕೇವಲ 4 ರಿಂದ 10 ದಿನದಲ್ಲಿ ಕಾಣಿಸಿಕೊಳ್ಳಬಹುದು. ಈ 4 ರಿಂದ 10 ದಿನಗಳು ಅಮೂಲ್ಯವಾಗಿದ್ದು ತುರ್ತಾಗಿ ರಕ್ಷಣೆ ನೀಡುವುದು ಮೇದಸ್ಸಿನಿಂದಲೇ ಸಾಧ್ಯ ಹೊರತು, ಬರೀ ಲಸಿಕೆಯಿಂದ (ಆಧುನಿಕ ಕೃಷಿ ಲಸಿಕೆಗಳನ್ನು ಸೇರಿ) ಸಾಧ್ಯವೇ ಇಲ್ಲ. ಏಕೆಂದರೆ ಮೊದಲ ಲಸಿಕೆ (ವೇಳಾಪಟ್ಟಿಯ ಅನುಸಾರವಾಗಿ) ನೀಡಿದ 14 ದಿನಗಳ ನಂತರ ರೇಬೀಸ್ ವಿರುದ್ಧ ರಕ್ಷಣಾವಸ್ತು ರೋಗಿಯ ದೇಹದಲ್ಲಿ ಸೂಕ್ತ ಪ್ರಮಾಣದಲ್ಲಿ ಉತ್ಪನ್ನಗೊಂಡು ರಕ್ಷಣೆ ನೀಡುತ್ತದೆ. ಆದುದರಿಂದ, ಹೆಚ್ಚು ಗಂಡಾಂತರ ಹೊಂದಿರುವ ವ್ಯಕ್ತಿಗಳಲ್ಲಿ ಆಂಟಿ ರೇಬೀಸ್ ಮೇದಸ್ಸು ಅಮೂಲ್ಯ ಹಾಗು ಜೀವ ರಕ್ಷಕ ಔಷಧಿಯಾಗಿರುತ್ತದೆ. ಈ ಮೇದಸ್ಸು ರೋಗಿಗೆ ಸ್ನಾಯುವಿನಲ್ಲಿ ನೀಡಿದ 1-3 ಗಂಟೆಯಲ್ಲಿ ರಕ್ತದಲ್ಲಿ ಬಂದು ಮುಂದೆ 10-14 ದಿನದವರೆಗೆ ರೇಬೀಸ್ ವೈರಸ್ಸಿನಿಂದ ನರಗಳ ಸೋಂಕು ತಗಲುವುದನ್ನು ತಡೆಯುತ್ತದೆ, ಹಾಗು ರೇಬೀಸ್ ಕಾಯಿಲೆ ಬರದಂತೆ ರಕ್ಷಣೆ ನೀಡುತ್ತದೆ. ಇದಲ್ಲದೆ ಕಚ್ಚಿದ ಗಾಯದಲ್ಲೂ ಕೆಲವೊಮ್ಮೆ ನೀಡುವುದರಿಂದ ರೇಬೀಸ್ ವೈರಸ್ ವಿಷಾಣು ಗಾಯದಲ್ಲಿದ್ದರೆ ಕೆಲವೇ ಕ್ಷಣಗಳಲ್ಲಿ ಅವನ್ನು ನಿಷ್ಕ್ರಿಯೆಗೊಳಿಸುತ್ತದೆ. ಈ ತುರ್ತು ರಕ್ಷಣಾ ಪರಿಣಾಮ ನೀಡುವ ಸಾಮರ್ಥ್ಯ ಯಾವುದೇ ಲಸಿಕೆಗೂ ಇರುವುದಿಲ್ಲ.

ii. ಜನ ಸಾಮಾನ್ಯರಲ್ಲಿ ಹಾಗು ಆಶ್ಚರ್ಯಕರವಾಗಿ ವೈದ್ಯರಲ್ಲೂ ಆಂಟಿ ರೇಬೀಸ್ ಮೇದಸ್ಸಿನ ಬಗ್ಗೆ ತಿಳಿವಳಿಕೆ ಕಡಿಮೆ ಇದೆ. ಈ ಕಾರಣದಿಂದ ಇದರ ಅವಶ್ಯಕತೆ ಇರುವ ಅತೀ ತೀವ್ರವಾಗಿ ಕಚ್ಚಲ್ಪಟ್ಟಿರುವ ರೋಗಿಗಳಿಗೆ (ಕ್ಲಾಸ್ 3 ಹೆಚ್ಚು ಅಪಾಯಕಾರಿ) ಇದು ಲಭ್ಯವಾಗದೆ, ದುರದೃಷ್ಟವಶಾತ್ ಈ ಕೆಲವರು ಮುಂದೆ ರೇಬೀಸ್ ಕಾಯಿಲೆಗೆ ಬಲಿಯಾಗುತ್ತಾರೆ. ಈ ರೀತಿ ಆಗದಂತೆ ತಡೆಯಬೇಕೆಂಬುದು ಇತ್ತೀಚೆಗೆ ಏಪ್ರಿಲ್ 1993ರಲ್ಲಿ ಇಂಡೋನೇಷಿಯದ ಜಕಾರ್ತದಲ್ಲಿ ನಡೆದ ವಿಶ್ವ

ಆರೋಗ್ಯ ಸಂಸ್ಥೆಯ ಸಮ್ಮೇಳನದಲ್ಲಿ ತೆಗೆದುಕೊಂಡ ಒಂದು ಮುಖ್ಯ ನಿರ್ಧಾರ. ಭಾರತದ ಪ್ರತಿನಿಧಿಗಳು ಇದಕ್ಕೆ ಸಮ್ಮತಿ ಸೂಚಿಸಿರುವುದರಿಂದ ಇದರ ಬಗ್ಗೆ ಸೂಕ್ತ ಮುಂದಿನ ಕ್ರಮಗಳನ್ನು ಕೈಗೊಳ್ಳುವುದು ಅತಿ ಅವಶ್ಯ.

ಇದು 5 ಮಿಲೀ (300 ಇಂಟರ್ ನ್ಯಾಷನಲ್ ಯುನಿಟ್‌ಗಳು ಪ್ರತಿ ಮಿಲೀ) ಸಣ್ಣ ಸೀಸೆಯಲ್ಲಿ ಲಭ್ಯವಿರುತ್ತದೆ. ಇದನ್ನು ಹೆಚ್ಚುವರಿ ಗಂಡಾಂತರ ರೋಗಿಗಳಿಗೆ ಪ್ರತಿ ಕಿ.ಗ್ರಾ. ದೇಹದ ತೂಕಕ್ಕೆ 40 ಅಂತಾರಾಷ್ಟ್ರೀಯ ಮಾನಕಗಳಷ್ಟು ಔಷಧಿಯನ್ನು ಕೊಡಬೇಕಾಗುತ್ತದೆ. ಹಾಗು 3000 ಅಂತಾರಾಷ್ಟ್ರೀಯ ಮಾನಕಗಳಿಗಿಂತ ಹೆಚ್ಚು ನೀಡಬಾರದು. ಇವನ್ನು ಪೃಷ್ಠದ ಸ್ನಾಯುವಿನಲ್ಲಿ ಆಳವಾದ ಚುಚ್ಚುಮದ್ದಿನ ರೂಪದಲ್ಲಿ ನೀಡಬೇಕು. ಪ್ರಾಣಿಯು ಕಚ್ಚಿದ 24 ಗಂಟೆಯೊಳಗೆ ರೋಗಿ ಬಂದರೆ ಒಟ್ಟು ಗುಟುಕಿನ ಅರ್ಧಭಾಗವನ್ನು ನಾಯಿ ಕಚ್ಚಿದ ಜಾಗದಲ್ಲಿ ಹಚ್ಚುವುದರಿಂದ ಅಥವ ಸೂಜಿ ಚುಚ್ಚುವುದರಿಂದ ಗಾಯದಲ್ಲಿ ನಾಯಿಜೊಲ್ಲು ಇದ್ದು ಅದರಲ್ಲಿ ರೇಬೀಸ್ ವೈರಸ್ ಇದ್ದರೆ ಮೇದಸ್ಸಿನ ಪ್ರಭಾವದಿಂದ ರೇಬೀಸ್ ವಿಷಾಣು ಸೋಂಕು ತಗಲುವ ಗಂಡಾಂತರ ತಪ್ಪುತ್ತದೆ. ಈ ಮೇದಸ್ಸಿನ ಬೆಲೆ ಒಂದು 5 ಮಿಲೀ ಸಣ್ಣ ಸೀಸೆಗೆ ಐವತ್ತು ರೂಪಾಯಿ. ಒಬ್ಬ ರೋಗಿಗೆ 30 ರಿಂದ 100ರೂಪಾಯಿಗಳವರೆಗೆ



ಚಿತ್ರ 3.10 ರೇಬೀಸ್ ಮೇದಸ್ಸು

ಕುದುರೆಯಿಂದ ಶುದ್ಧೀಕರಿಸಿದ್ದು (ಎಡಕ್ಕೆ). ಮಾನವ ಶುದ್ಧೀಕರಿಸಿದ್ದು (ಬಲಕ್ಕೆ)

ವೆಚ್ಚವಾಗಬಹುದು. ಆದರೆ ಇದು ಜೀವರಕ್ಷಿಸುವ ಔಷಧಿ ಎಂಬುದನ್ನು ನೆನಪಿಡಬೇಕು.

**ಆ. ಮಾನವ ಶುದ್ಧೀಕರಿಸಿದ ರೇಬೀಸ್ ಮೇದಸ್ಸು**

ಇದನ್ನು ಭಾರತಕ್ಕೆ ಫ್ರಾನ್ಸ್ ಹಾಗು ಜರ್ಮನಿ ದೇಶಗಳಿಂದ ಆಮದು ಮಾಡಿಕೊಳ್ಳಲಾಗುತ್ತಿದೆ. ಇದು ಮಾರುಕಟ್ಟೆಯಲ್ಲಿ ರಾಜಧಾನಿಗಳಲ್ಲಿ ಹಾಗು ದೊಡ್ಡ ಪಟ್ಟಣಗಳಲ್ಲಿ ಮಾತ್ರ ಲಭ್ಯವಿದೆ.

i. ಬೆರಿರ್‍ಯಾಬ್ : ಹೆಕ್ಸ್ಟ್ ಇಂಡಿಯ ಎಂಬ ಖಾಸಗಿ ಔಷಧ ಸಂಸ್ಥೆ ಜರ್ಮನಿಯಿಂದ ಆಮದು ಮಾಡಿಕೊಳ್ಳುತ್ತದೆ. ಮಾರುಕಟ್ಟೆಯಲ್ಲಿ ಲಭ್ಯವಿದೆ.

ii. ಐಮೊಗ್ಯಾವ್ ರೇಬೀಸ್ : ಪ್ಯಾಶ್ಚರ್ ಮರಿಯೋ ಅಂತಾರಾಷ್ಟ್ರೀಯ ಸಂಸ್ಥೆ, ಫ್ರಾನ್ಸ್‌ನಿಂದ ಆಮದು ಮಾಡಿ, ಭಾರತದ "ಆಲಿಡಾಕ್" ಎಂಬ ಖಾಸಗಿ ಔಷಧ ಸಂಸ್ಥೆ ಮೂಲಕ ಮಾರಾಟ ಮಾಡುತ್ತಿದೆ.

ಈ ಎರಡು ಔಷಧಿಗಳು ಒಂದೇ ಆಗಿದ್ದು, ಅವುಗಳು 2 ಮಿಲೀ ಹಾಗು 5 ಮಿಲೀ ಸಣ್ಣ ಸೀಸೆಗಳಲ್ಲಿ ಲಭ್ಯವಿರುತ್ತವೆ. ಇವುಗಳನ್ನು ಪ್ರತಿ ಕಿ.ಗ್ರಾಂ. ದೇಹತೂಕಕ್ಕೆ 20 ಅಂತರ ರಾಷ್ಟ್ರೀಯ ಮಾನಕಗಳಂತೆ (20 International Unit/KG Body Weight) ನಿಗದಿಗೊಳಿಸಿ ಒಟ್ಟು ಗುಟುಕನ್ನು ಮೇಲೆ ವಿವರಿಸಿದ ಕುದುರೆ ಮೇದಸ್ಸನ್ನು ನೀಡುವ ವಿಧಾನದಲ್ಲೇ ನೀಡಬೇಕು. ಆದರೆ ಇದು ಶುದ್ಧೀಕೃತ ಮಾನವನ ಮೇದಸ್ಸು ಆಮದರಿಂದ ಇದಕ್ಕೆ ಪೂರ್ವ ಪರೀಕ್ಷೆ ಗುಟುಕು (ಟೆಸ್ಟ್ ಡೋಸ್) ನೀಡುವ ಅವಶ್ಯಕತೆಯಿಲ್ಲ.

ಆದರೆ ಈ ಔಷಧಿಗಳು ಅತೀ ದುಬಾರಿ. 2 ಮಿಲೀ (300 ಅಂತಾರಾಷ್ಟ್ರೀಯ ಮಾನಕಗಳು) ಬೆಲೆ ಒಂದು ಸಾವಿರ ರೂಪಾಯಿಗಳಾದರೆ 5 ಮಿಲೀ (750 ಅಂತಾರಾಷ್ಟ್ರೀಯ ಮಾನಕಗಳು) ಬೆಲೆ ಎರಡುಸಾವಿರ ರೂಪಾಯಿಗಳವರೆಗೆ ಆಗಬಹುದು. ಇದು ಒಂದು ರೋಗಿಗೆ ಒಂದು ಸಾವಿರ ರೂಪಾಯಿಯಿಂದ–ಮೂರೂವರೆ ಸಾವಿರ ರೂಪಾಯಿಗಳವರೆಗೂ

ಆಗಬಹುದು. ಇದನ್ನು ಅತಿ ಶ್ರೀಮಂತರು ಮಾತ್ರ ಉಪಯೋಗಿಸಲು ಸಾಧ್ಯ ಎನ್ನಬಹುದು.

ಆಂಟಿ ರೇಬೀಸ್ ಮೇದಸ್ಸು (ಕುದುರೆಯದೇ ಆಗಲಿ ಅಥವಾ ಮಾನವನದೇ ಆಗಲಿ) ಜೀವ ಸಂರಕ್ಷಕ ಔಷಧಗಳೆಂಬುದನ್ನು ನೆನಪಿಡಬೇಕು.

**೩.೬ ಮುಂಜಾಗ್ರತೆ ಲಸಿಕೆ ಸಂರಕ್ಷಣೆ**

ತಮ್ಮ ದಿನನಿತ್ಯ ಕೆಲಸ, ಕಾರ್ಯ ಹಾಗು ಇತರೇ ಕಾರಣಗಳಿಂದಾಗಿ ರೇಬೀಸ್ ಸೋಂಕು ತಗುಲುವ ಸಂಭವ ಇರುವ ವ್ಯಕ್ತಿಗಳು ಮುಂಜಾಗ್ರತೆ ಕ್ರಮವಾಗಿ ತಮ್ಮ ಕ್ಷೇಮಕ್ಕಾಗಿ ರೇಬೀಸ್ ನಿರೋಧಕ ಲಸಿಕೆ ತೆಗೆದುಕೊಳ್ಳಬೇಕು. ಆದರೆ ಈ ರೀತಿಯ ರಕ್ಷಣೆಯನ್ನು ಈ ಕೆಳಕಂಡ ವ್ಯಕ್ತಿಗಳಿಗೆ ಶಿಫಾರಸ್ಸು ಮಾಡಲಾಗಿದೆ.

ಅ. ಪಶು ವೈದ್ಯರು

ಆ. ನಾಯಿ ಸಾಕಣೆ ಹಾಗು ತರಬೇತಿ ಮಾಡುವವರು.

ಇ. ರೇಬೀಸ್ ಕಾಯಿಲೆಗೆ ತುತ್ತಾದ ಪ್ರಾಣಿ ಹಾಗು ರೋಗಿ ಸಂಪರ್ಕಕ್ಕೆ ಬರುವ ಆಸ್ಪತ್ರೆಯ ಸಿಬ್ಬಂದಿ ಮತ್ತು ನೌಕರವರ್ಗ.

ಈ. ಚರ್ಮ ಪ್ರಸಾಧನಕಾರರು, ಮೃಗಾಲಯ ಕೆಲಸಗಾರರು, ಕಸಾಯಿ ಖಾನೆಯ ಕೆಲಸಗಾರರು, ಬೇಟೆಗಾರರು, ಮನೆ ಮನೆಗೆ ಹೋಗಿ ವ್ಯಾಪಾರ ಮಾಡುವ ವ್ಯಾಪಾರಿಗಳು, ಅಂಚೆಪೇದೆ ಇತ್ಯಾದಿ.

ಉ. ಬೀದಿ ನಾಯಿಗಳ ಹಾವಳಿ ಇರುವ ವಠಾರದ ನಿವಾಸಿಗಳು, ಮುಂಜಾನೆ ಓಡುವವರು ಇತ್ಯಾದಿ.

ಊ. ಪ್ರಾಣಿಗಳನ್ನು ಸಾಕುವವರು.

ಆದರೆ ಈ ಮುಂಜಾಗ್ರತೆ ರಕ್ಷಣೆಗೆ ಕೇವಲ ಅಂಗಸತ್ವ ಕೃಷಿ ಲಸಿಕೆಗಳನ್ನು ಮಾತ್ರ ಉಪಯೋಗಿಸಲು ಸಾಧ್ಯ. ಇದನ್ನು (ಎಚ್.ಡಿ.ಸಿ.ಪಿ/ರಬೀಪುರ್/ವಿರೋರ್‍ಯಾಬ್) ಮೊದಲು ದಿನ 0,7 ಹಾಗು 28 (3

ಚುಚ್ಚು ಮದ್ದನ್ನು) ವೇಳಪಟ್ಟಿಯಂತೆ ಕೊಡಬೇಕು. ಈ ಚುಚ್ಚುಮದ್ದನ್ನು ಮರೆಯದೆ ತೋಳಿನಲ್ಲಿ ಆಳವಾಗಿ ಸ್ನಾಯುವಿನ ಮಾರ್ಗದಲ್ಲೇ ಪಡೆಯಬೇಕು. ಒಂದು ವರ್ಷದ ನಂತರ 4ನೇ ಗುಟುಕನ್ನು ಪಡೆದು, ನಂತರ ಪ್ರತಿ 3-5 ವರ್ಷಕ್ಕೆ ಒಂದು ಗುಟುಕು ಲಸಿಕೆ ತೆಗೆದುಕೊಂಡರೆ ಸಾಕು. ಇಂತಹ ಮುಂಜಾಗ್ರತೆ ಲಸಿಕೆ ಪಡೆದ ವ್ಯಕ್ತಿಗಳು ಯವುದೇ ಪ್ರಾಣಿಯಿಂದ ಕಚ್ಚಿಸಿಕೊಂಡರೆ (ರೇಬೀಸ್ ಎಂದು ಶಂಕಿಸಲಾದ ನಾಯಿಯಾದರೂ ಕೂಡ) ಪ್ರಥಮ ಚಿಕಿತ್ಸೆ ಮಾಡಿ, ಒಂದೇ ಒಂದು ಯಾವುದೇ ಅಂಗಸತ್ವ ಕೃಷಿಲಸಿಕೆ ಪಡೆದರೆ ಸಾಕಾಗುತ್ತದೆ. ಹಾಗು ಇಂತಹ ವ್ಯಕ್ತಿಗಳಿಗೆ ಆಂಟಿ ಮೇದಸ್ಸು ಪಡೆಯುವ ಅವಶ್ಯಕತೆ ಇರುವುದಿಲ್ಲ.

**೩.೭ ಲಸಿಕೆದಾರರಲ್ಲಿ ರಕ್ಷಣಾವಸ್ತುವಿನ ಪರೀಕ್ಷೆ :**

ರೋಗ ನಿರೋಧಕ ಲಸಿಕೆಯನ್ನು ಪಡೆದವರು (ಪ್ರಾಣಿ ಕಚ್ಚಿದ ನಂತರವಾಗಲಿ ಅಥವ ಮುಂಜಾಗ್ರತೆ ಕ್ರಮವಾಗಿ ಲಸಿಕೆ ಪಡೆದವರಾಗಲಿ) ತಮ್ಮ ದೇಹದಲ್ಲಿ ರೋಗ ನಿರೋಧಕ ರಕ್ಷಣಾ ವಸ್ತು ಬಂದಿದೆಯೇ ಹಾಗು ರೇಬೀಸ್ ವಿರುದ್ಧ ರಕ್ಷಣೆ ದೊರಕಿದೆಯೇ ಎನ್ನುವುದನ್ನು ಅವರ ರಕ್ತ ಪರೀಕ್ಷೆಯಿಂದ ತಿಳಿದು ಕೊಳ್ಳಬಹುದು. ಈ ರಕ್ತ ಪರೀಕ್ಷೆಯನ್ನು ಸಾಮಾನ್ಯವಾಗಿ ಮೂರು ವಿಧಾನದಿಂದ ಮಾಡಬಹುದು.

ಅ. ರೀಫಿಟ್ ಪರೀಕ್ಷೆ : ಇದು ಹತ್ತಿರ ಎಂದರೆ ತಮಿಳು ನಾಡಿನ ಕೂನೂರಿನ ಪ್ಯಾಶ್ಚರ್ ಸಂಸ್ಥೆಯಲ್ಲಿ ಸೌಲಭ್ಯವಿದೆ.

ಆ. ಸಣ್ಣಿಲಿಯಲ್ಲಿ ಪರೀಕ್ಷೆ: ಇದು ಕೂಡ ತಮಿಳು ನಾಡಿನ ಕೂನೂರಿನ ಪ್ಯಾಶ್ಚರ್ ಸಂಸ್ಥೆಯಲ್ಲಿ ಮಾಡಲಾಗುತ್ತಿದೆ.

ಇ. ಎಲಿಸ ಪರೀಕ್ಷೆ: ಇದು ಒಂದು ಪರೀಕ್ಷಾ ಪೆಟ್ಟಿಗೆ. ಇದನ್ನು ಆಮದು ಮಾಡುಕೊಂಡು, ಯಾವುದೇ ಒಂದು ಮಧ್ಯಮ ಪ್ರಯೋಗ ಶಾಲೆಯಲ್ಲಿ ಈ ಪರೀಕ್ಷೆಯನ್ನು ಮಾಡಬಹುದು. ವೈದ್ಯಕೀಯ ಕಾಲೇಜುಗಳಲ್ಲಿ, ಪಶು ವೈದ್ಯಶಾಲೆಗಳಲ್ಲಿ ಹಾಗು

ಕೆಲವು ಜಿಲ್ಲಾ ಆರೋಗ್ಯ ಕೇಂದ್ರಗಳ ಪ್ರಯೋಗಶಾಲೆಯಲ್ಲಿ ಕೂಡ ಇದರಿಂದ ಪರೀಕ್ಷೆ ಮಾಡುವ ಸೌಲಭ್ಯವನ್ನು ಏರ್ಪಡಿಸಬಹುದು.

ಲಸಿಕೆದಾರರಲ್ಲಿ ರೇಬೀಸ್ ನಿರೋಧಕ ರಕ್ಷಣಾ ವಸ್ತು ಅವರ ಪರೀಕ್ಷಿಸಿದ ರಕ್ತ ಮೇದಸ್ಸಿನಲ್ಲಿ ಒಂದು ಮಿಲೀಗೆ 0.5 ಅಂತರರಾಷ್ಟ್ರೀಯ ಮಾನಕಗಳಿದ್ದರೆ ಅದು ರಕ್ಷಣಾತ್ಮಕ ಎಂದು ಸೂಚಿಸುತ್ತದೆ.

# ೪. ಚಿಕಿತ್ಸೆ ಹಾಗೂ ಶುಶ್ರೂಷೆ

## ೪.೧ ಪ್ರಯೋಗ ಶಾಲೆಯ ರೇಬೀಸ್ ರೋಗ ಖಚಿತ ನಿರ್ಧಾರ

ಸಾಮಾನ್ಯವಾಗಿ ರೇಬೀಸ್ ತಗುಲಿದೆ ಎಂದು ಅನುಮಾನ ಬಂದಾಗ ವೈದ್ಯರು ರೋಗ ಚಿಹ್ನೆಗಳನ್ನು ಗಮನಿಸುತ್ತಾರೆ. ಅನಂತರ ಸಾಂಕ್ರಾಮಿಕ ರೋಗದ ಆಸ್ಪತ್ರೆಗೆ ರವಾನಿಸಿ ಅಲ್ಲಿ ರೋಗಿಗಳನ್ನು ಪ್ರತ್ಯೇಕಿಸಿ ನಿಗಾವಣೆಗೆ ಒಳಪಡಿಸಿ ಔಷಧೋಪಚಾರ ನೀಡಲಾಗುತ್ತದೆ. ಇಂತಹ ರೋಗಿಗಳು ನಿಜವಾಗಿಯೂ ರೇಬೀಸ್ ಕಾಯಿಲೆಗೆ ತುತ್ತಾಗಿದ್ದರೆ ಸಾಮಾನ್ಯವಾಗಿ 3 ರಿಂದ 7 ದಿನಗಳೊಳಗೆ ಮರಣ ಹೊಂದುತ್ತಾರೆ.

ಈ ರೋಗ ತಗುಲಿದೆ ಎಂದು ಅನುಮಾನ ಬಂದಾಗ ರೋಗ ನಿರ್ಧಾರಕ್ಕೆ ವ್ಯಕ್ತಿಯ ಕಣ್ಣಿನಿಂದ ಲೇಪನ, ಬೆನ್ನುನೀರು, ಮತ್ತು ಜೊಲ್ಲು ತೆಗೆದುಕೊಂಡು ಕಾಂತಿಯುತ ಸೂಕ್ಷ್ಮದರ್ಶಕ ಯಂತ್ರದಿಂದ ರೇಬೀಸ್ ವೈರಸ್ ವಿಷಾಣುವನ್ನು ಗುರುತಿಸಿ ರೋಗಖಚಿತ ಪಡಿಸಿಕೊಳ್ಳಬಹುದು. ಆದರೆ ಇದು ಶೇಕಡ 30-50 ರೋಗಿಗಳಲ್ಲಿ ಖಚಿತವಾದ ಫಲಿತಾಂಶ ನೀಡುವ ಸಂಭವವಿರುವುದರಿಂದ ಸಾಮಾನ್ಯವಾಗಿ ವೈದ್ಯರು ರೇಬೀಸ್ ಕಾಯಿಲೆಯನ್ನು ರೋಗಲಕ್ಷಣ ಚಿಹ್ನೆಗಳಿಂದಲೇ ಗುರುತಿಸಿ ನಿರ್ಧರಿಸುತ್ತಾರೆ. ಇದಕ್ಕೆ ಅತಿ ಸುಸಜ್ಜಿತವಾದ ವ್ಯವಸ್ಥೀಕರಿಸಿದ ಪ್ರಯೋಗಶಾಲೆ ಹಾಗು ತರಬೇತಿ ಪಡೆದ ಸಿಬ್ಬಂದಿ ಬೇಕು. ಈ ವ್ಯವಸ್ಥೆಯು ಈಗ ಸದ್ಯಕ್ಕೆ ಹತ್ತಿರದ ತಮಿಳುನಾಡಿನ ಕೂನೂರಿನಲ್ಲಿರುವ ಪ್ಯಾಶ್ಚರ್ ಸಂಸ್ಥೆಯಲ್ಲಿ ಮಾತ್ರ ಲಭ್ಯವಿದೆ. ಈ ಮಹಾಮರಣಾಂತಕ ಕಾಯಿಲೆಗೆ ರೋಗ ಖಚಿತಿಸುವ ಸೌಲಭ್ಯ ಕರ್ನಾಟಕದಲ್ಲಿ ಇಲ್ಲದಿರುವುದು ಒಂದು ಅತಿ ಮುಖ್ಯ ಕೊರತೆಯಾಗಿದೆ.

ಇತ್ತೀಚೆಗೆ ಬೆಂಗಳೂರಿನ ಸರ್ಕಾರಿ ಪಶುವೈದ್ಯ ಕಾಲೇಜು ರೋಗ ಲಕ್ಷಣ ವಿಭಾಗದಲ್ಲಿ ಕಾಂತಿಯುತ ಸೂಕ್ಷ್ಮದರ್ಶಕ ಯಂತ್ರ ಹಾಗು ರೋಗ ಖಚಿತ ಸೌಕರ್ಯವನ್ನು ಕಲ್ಪಿಸಿರುವುದರಿಂದ ಕೆಲವೊಮ್ಮೆ ವಿಶೇಷವಾಗಿ ಈ ಸೌಕರ್ಯವನ್ನು ಪಡೆಯುವ ಸಾಧ್ಯತೆಗಳುಂಟು.



**ಚಿತ್ರ 4.1 ಕಾಂತಿಯುತ ಸೂಕ್ಷ್ಮದರ್ಶಕ ಯಂತ್ರದಿಂದ ರೇಬೀಸ್ ವಿಷಾಣು ಪರೀಕ್ಷೆ**

ಒಮ್ಮೊಮ್ಮೆ ರೋಗಿ ಮರಣ ಹೊಂದಿದ ನಂತರ ರೋಗಿಯು ಖಚಿತವಾಗಿ ರೇಬೀಸ್ ರೋಗದಿಂದಲೇ ಮರಣ ಹೊಂದಿದ್ದಾನೆಯೇ ಎಂದು ನಿರ್ಧರಿಸಲು ಕೂಡ ಮೇಲೆ ವಿವರಿಸಿದ ಸೌಲಭ್ಯವನ್ನು ಉಪಯೋಗಸಬಹುದು.

ಇಂದು ನಮ್ಮ ರಾಷ್ಟ್ರದಲ್ಲಿ ಮತ್ತು ರಾಜ್ಯಗಳಲ್ಲಿ ಅದರಲ್ಲೂ ಕರ್ನಾಟಕ ರಾಜ್ಯದಲ್ಲಿ ರೇಬೀಸ್ ರೋಗಪ್ರಯೋಗಶಾಲೆಯ ಖಚಿತ ನಿರ್ಧಾರದ ವ್ಯವಸ್ಥೆ ಇಲ್ಲದಿರುವುದು ದುರದೃಷ್ಟಕರ. ಈ ಸೌಲಭ್ಯವನ್ನು ಬೇಗ ಕಲ್ಪಿಸುವುದು ಸರ್ಕಾರದ ಹೊಣೆ. ಹಾಗೂ ಸರ್ಕಾರೇತರ ಸಂಘ ಸಂಸ್ಥೆಗಳು. ಈ ದಿಶೆಯಲ್ಲಿ ಸೌಲಭ್ಯ ಕಲ್ಪಿಸಲು ಪ್ರಯತ್ನಿಸುತ್ತಿರುವುದು ಸ್ವಾಗತಾರ್ಹ.

## ೪.೨ ಚಿಕಿತ್ಸೆ ಹಾಗು ಶುಶ್ರೂಷೆ

ರೇಬೀಸ್ ರೋಗವು ಸಾಂಕ್ರಾಮಿಕ ಸೋಂಕು ತಗಲುವ ಹಾಗು ಮಹಾ ಮರಣಾಂತಕವಾದುದರಿಂದ ಜನರು ಈ ರೋಗದ ನಿರ್ಣಯವನ್ನು ರೋಗಿಯ ಸಂಬಂಧಿಕರಿಗೆ ತಿಳಿಸಿದ ಕೂಡಲೇ ಅವರು ಗಾಬರಿ ಹಾಗೂ ಭಯಭೀತರಾಗುತ್ತಾರೆ. ಕೆಲವೊಮ್ಮೆ ವೈದ್ಯರೂ ದಾದಿಯರು ಕೂಡ ಭಯಭೀತರಾಗುತ್ತಾರೆ. ಆದುದರಿಂದ ಇಂತಹ ರೋಗಿಗಳನ್ನು ಸಾಂಕ್ರಾಮಿಕ ರೋಗ, ಜಿಲ್ಲಾ ಹಾಗೂ ಮೆಡಿಕಲ್ ಆಸ್ಪತ್ರೆಗಳಿಗೆ ಕಳುಹಿಸಬೇಕು. ಅಲ್ಲಿ ಮುಂಜಾಗ್ರತೆ ಹಾಗು ವೈಯಕ್ತಿಕ ಎಚ್ಚರಿಕೆವಹಿಸಿ, ನುರಿತ ವೈದ್ಯರು ಹಾಗೂ ದಾದಿಯರು ಈ ರೋಗಿಗಳ ಚಿಕಿತ್ಸೆ ಹಾಗು ಶುಶ್ರೂಷೆ ಮಾಡುತ್ತಾರೆ. ಸಾಮಾನ್ಯವಾಗಿ ಈ ರೋಗಿಗಳಿಗೆ ಗ್ಲೂಕೋಸ್, ನಿದ್ರಾಔಷಧಿ, ನೋವು ಶಮನ ಔಷಧಿ, ಸ್ಟೀರಾಯ್ಡ್ಸ್, ಮೆನಿಟಾಲ್ ಹಾಗು ಇತರೇ ಔಷಧಿಗಳನ್ನು ರಕ್ತನಾಳದ ಮೂಲಕ ನೀಡಲಾಗುತ್ತದೆ.

ಈ ರೋಗಿಗಳ ಜೊಲ್ಲು, ಮೂತ್ರ, ಕಣ್ಣೀರಿನಲ್ಲಿ ರೇಬೀಸ್ ವೈರಸ್ ಇರುವ ಸಾಧ್ಯತೆಯಿರುವುದರಿಂದ ಅವರ ಆರೈಕೆ ಮಾಡುವವರು ಇವುಗಳ ಸಂಪರ್ಕ ಬರದ ಹಾಗೆ ಮುನ್ನೆಚ್ಚರಿಕೆ ತೆಗೆದುಕೊಳ್ಳಬೇಕು. ಹಾಗೂ ಆಕಸ್ಮಿಕವಾಗಿ ಅವುಗಳ ಸಂಪರ್ಕವಾದರೆ ತಕ್ಷಣ ನೀರು ಹಾಗು ಸಾಬೂನಿನಿಂದ ತೊಳೆದು ಯಾವುದಾದರೂ ರೋಗನಾಶಕ (ಡೆಟಾಲ್, ಸ್ಯಾವಲಾನ್, ಟಿಂಕ್ಚರ್ ಇತ್ಯಾದಿ) ಸಂಪರ್ಕಿಸಿದ ಸ್ಥಳಕ್ಕೆ ಹಚ್ಚಬೇಕು. ಸಾಧ್ಯವಾದಲ್ಲಿ ಶುಶ್ರೂಷೆ ಮಾಡುವವರು ಮುಂಜಾಗ್ರತೆಯ ಕ್ರಮವಾಗಿ ಕೃಷಿ ಲಸಿಕೆ ಸಂರಕ್ಷಣೆ ಪಡೆಯುವುದು ಒಳ್ಳೆಯದು.

ಈ ರೋಗಿಗಳು ಸಾಮಾನ್ಯವಾಗಿ ಮೂರರಿಂದ ಏಳು ದಿನಗಳವರೆಗೆ ಬದುಕುತ್ತಾರೆ. ಹಾಗೂ ಇವರು ಹೃದಯಬಡಿತ ಅಥವಾ ಶ್ವಾಸಕೋಶದ ಕೆಲಸ ನಿಂತು ಪ್ರಾಣ ನೀಗುತ್ತಾರೆ. ಈ ರೋಗಿಗಳ ಶವದಿಂದ ಬೇರೆಯವರಿಗೆ ರೋಗದ ನಂಜು ಸೋಂಕುವ ಸಾಧ್ಯತೆ ಇರುವುದರಿಂದ ಮೇಲೆ ಸೂಚಿಸಿದ ಮುನ್ನೆಚ್ಚರಿಕೆ ವಹಿಸಬೇಕು. ಶವದ ದಹನಕ್ರಿಯೆ ಮಾಡುವುದು ಸಾರ್ವಜನಿಕ ಆರೋಗ್ಯ ದೃಷ್ಟಿಯಿಂದ ಸೂಕ್ತಕರ, ಹೂಳುವದು ಅಪೇಕ್ಷಣೀಯವಲ್ಲ.

# ೫. ಪ್ರಾಣಿಗಳಲ್ಲಿ ರೇಬೀಸ್

## ೫.೧ ಪೀಠಿಕೆ

ಮುಖ್ಯವಾಗಿ ರೇಬೀಸ್ ಕಾಯಿಲೆಯು ಪ್ರಾಣಿಗಳ ಕಾಯಿಲೆ ಹಾಗು ಪ್ರಾಣಿಗಳಿಂದ ಮನುಷ್ಯನಿಗೆ ಹರಡುವ ಸಾಂಕ್ರಾಮಿಕ ರೋಗ. ಮನುಷ್ಯನಲ್ಲಿ ಇದು ಬಹುತೇಕ ಕೊನೆಗೊಂಡು ಮುಂದೆ ಹರಡುವುದಿಲ್ಲ. ಇದು ಸಾಮಾನ್ಯವಾಗಿ ಎಲ್ಲ ಬಿಸಿರಕ್ತದ ಪ್ರಾಣಿಗಳಿಗೆ ಬರಬಹುದಾದ ಕಾಯಿಲೆ ಹಾಗು ಮೂಲತಃ ಅರಣ್ಯ ಪ್ರಾಣಿಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಒಂದು ರೇಬೀಸ್ ರೋಗದ ಪ್ರಾಣಿ ಇನ್ನೊಂದು ಪ್ರಾಣಿಯನ್ನು ಕಚ್ಚುವುದರಿಂದ ಈ ರೋಗವು ಹರಡುತ್ತದೆ. ಸಾಮಾನ್ಯವಾಗಿ ಕಾಡು ಪ್ರಾಣಿಗಳಾದ ನರಿ, ಗುಳ್ಳೆನರಿ, ಮುಂಗುಸಿ, ತೋಳ, ಕೋತಿ ಹಾಗು ಇತರೆ ಪ್ರಾಣಿಗಳಿಗೆ ರೇಬೀಸ್ ಬರಬಹುದು. ಅನಂತರ ಈ ಕಾಯಿಲೆ ಅರಣ್ಯ ಪ್ರಾಣಿಗಳಿಂದ ಹತ್ತಿರದ ಜನವಾಸಿತ ಪ್ರದೇಶದ ಪ್ರಾಣಿಗಳಾದ ನಾಯಿ ಹಾಗು ಬೆಕ್ಕಿಗೆ ಹರಡುತ್ತದೆ. ಮನುಷ್ಯನಿಗೆ ಮುಖ್ಯವಾಗಿ ನಾಯಿ, ಬೆಕ್ಕು(ಶೇ. 96-97 ಭಾಗ)ಗಳಿಂದ ರೇಬೀಸ್ ರೋಗ ಬರಲು ಕಾರಣವಾಗಿದೆ. ಇದಲ್ಲದೆ ಒಮ್ಮೊಮ್ಮೆ ಹುಚ್ಚುನಾಯಿಯು, ಹಸು, ಕರು, ಎಮ್ಮೆ, ಕತ್ತೆ, ಕುದುರೆ, ಸಾಕಿದ ಕೋತಿ, ಮೇಕೆ, ಕುರಿ ಇತ್ಯಾದಿ ಸಾಕಿದ ಪ್ರಾಣಿಗಳಿಗೆ ಕಚ್ಚಿದರೆ ಆ ಪ್ರಾಣಿಗಳಿಗೂ ಕೂಡ ರೇಬೀಸ್ ಬಂದು ಆ ಪ್ರಾಣಿಗಳು ಕೆಲವೊಮ್ಮೆ ಅಪರೂಪಕ್ಕೆ ಮನುಷ್ಯನಿಗೆ ಕಚ್ಚಿ ರೋಗ ಬಂದ ನಿದರ್ಶನಗಳು ಕೂಡ ಇವೆ.

## ೫.೨ ರೋಗ ಪಕ್ವ ಸ್ಥಿತಿಯ ಕಾಲ

ಸಾಮಾನ್ಯವಾಗಿ ನಾಯಿಗಳಲ್ಲಿ ಇದು 10ದಿನಗಳಿಂದ ಎರಡು ತಿಂಗಳು ಹಾಗು ಕೆಲವೊಮ್ಮೆ 6-9 ತಿಂಗಳು ಇರಬಹುದು. ಆದರೆ ಈ ಎರಡು ಪ್ರಾಣಿಗಳಲ್ಲಿ ರೋಗಲಕ್ಷಣಗಳು ಕಾಣುವ 3 ರಿಂದ 5 ದಿನಗಳ ಮೊದಲೇ (ಹೊರನೋಟಕ್ಕೆ ಆರೋಗ್ಯವಿರುವಂತೆ ಕಾಣುವಾಗಲೇ) ಅಂತಹ ಪ್ರಾಣಿಗಳ ಜೊಲ್ಲಿನಲ್ಲಿ ರೇಬೀಸ್ ವೈರಸ್ ಬಂದಿರುತ್ತದೆ. ಇಂತಹ





ಪ್ರಾಣಿಗಳು ಮುಂದೆ ರೇಬೀಸ್ ಕಾಯಿಲೆ ಬಂದು 5 ರಿಂದ 7 ದಿನಗಳೊಳಗೆ ಸಾಯುತ್ತವೆ. ಆದುದರಿಂದ ನಾಯಿ ಕಚ್ಚಿದಾಗ ಆರೋಗ್ಯವಾಗಿ ಕಂಡುಬಂದರೂ ಕಚ್ಚಿಸಿಕೊಂಡವರಿಗೆ ರೋಗ ನಿರೋಧಕ ಲಸಿಕೆಯನ್ನು ಶುರು ಮಾಡಿ ನಾಯಿಯನ್ನು ಹತ್ತು ದಿನಗಳ ಕಾಲ ಗಮನಿಸಬೇಕು. ಕಚ್ಚಿದ ಐದು ದಿನಗಳಲ್ಲಿ ನಾಯಿಯಲ್ಲಿ ರೇಬೀಸ್ ಲಕ್ಷಣಗಳು ಕಂಡು ಬಂದರೆ ಲಸಿಕೆಯನ್ನು ವೇಳಾ ಪಟ್ಟಿಯಂತೆ ಪೂರ್ತಿ ನೀಡಬೇಕಾಗುತ್ತದೆ. ಇಲ್ಲದಿದ್ದರೆ 5 ದಿನಗಳ ನಂತರ ನಾಯಿಯು ಆರೋಗ್ಯವಾಗಿದ್ದರೆ ಲಸಿಕೆಯನ್ನು (ನರಸತ್ವ) ಅಲ್ಲಿಗೆ ನಿಲ್ಲಿಸಲಾಗುತ್ತದೆ. ಹಾಗು ಆರನೇ ದಿನದಿಂದ ಹತ್ತನೇ ದಿನದವರೆಗೆ ನಾಯಿಯನ್ನು ಗಮನಿಸಬೇಕೆಂದು ತಿಳಿಸುತ್ತಾರೆ. ಹತ್ತು ದಿನಗಳು ನಾಯಿಯು ಸಂಪೂರ್ಣವಾಗಿ ಬದುಕುಳಿದರೆ ಅದು ರೇಬೀಸ್ ಇಲ್ಲದ ನಾಯಿ ಎಂದು ನಿರ್ಧಾರ ಮಾಡಬಹುದು. ಈ ನೀತಿಯನ್ನು 1991ರಲ್ಲಿ ವಿಶ್ವ ಆರೋಗ್ಯ ಸಂಸ್ಥೆಯು ವಿಮರ್ಶಿಸಿ ಮುಂದೆಯೂ ಪಾಲಿಸಲು ಸೂಚನೆ ನೀಡಿದೆ.

## ೫.೩ ನಾಯಿಯಲ್ಲಿ ರೇಬೀಸ್

ನಾಯಿಯಲ್ಲಿ ರೇಬೀಸ್ ಮುಖ್ಯವಾಗಿ ಎರಡು ರೂಪದಲ್ಲಿ ಕಾಣಿಸಿಕೊಳ್ಳುತ್ತದೆ.

ಅ. ಸ್ಪಷ್ಟ ಅಥವಾ ಉಗ್ರ ರೇಬೀಸ್, ಆ. ಮೂಕ ರೇಬೀಸ್

## ಅ. ಸ್ಪಷ್ಟ ಅಥವಾ ಉಗ್ರ ಅಥವಾ ಹುಚ್ಚು ಲಕ್ಷಣ

ಇಂತಹ ಸ್ಥಿತಿಯಲ್ಲಿ ಕಂಡು ಬರುವ ಚಿಹ್ನೆಗಳು ಹಾಗು ರೋಗ ಲಕ್ಷಣಗಳು ಹೀಗಿರುತ್ತವೆ

**ಮೊದಲನೆಯ ಹಂತ**

i. ಆತಂಕ ಭರಿತ, ಗೊತ್ತುಗುರಿ ಇಲ್ಲದ, ವಾಯರ್ದಕ ದೃಷ್ಟಿಬೀರುವ ಕಣ್ಣುಗಳಿರುತ್ತವೆ.

ii. ನಾಯಿಯ ಸ್ವಭಾವ ಬದಲಾಗುತ್ತದೆ. ಜನರಿಂದ ತಪ್ಪಿಸಿಕೊಳ್ಳುತ್ತದೆ, ಅಥವಾ ಜನಗಳತ್ತ ಹಿಂದಿಗಿಂತ ಹೆಚ್ಚು ಒಲವು ತೋರಿಸುತ್ತದೆ.



ಚಿತ್ರ 5.1 ಉದ್ರೇಕಗೊಂಡಿರುವ ಹುಚ್ಚು ನಾಯಿ
(ಮೂಲ: ಭಾರತೀಯ ಸೀರಮ್ ಸಂಸ್ಥೆ)

iii. ಅಸಾಧಾರಣವಾದ ಚಡಪಡಿಕೆಗಗೊಳಗಾಗಿ ತೊಂದರೆಗೆ ಒಳಗಾಗುತ್ತದೆ. ಇಲ್ಲವೆ ಅಸಮಾನ್ಯವಾಗಿ ತೆಪ್ಪಗಿರುತ್ತದೆ.

**ಎರಡನೆಯ ಹಂತ**

i. ಪರಿಚಿತ ವ್ಯಕ್ತಿ/ಯಜಮಾನನನ್ನು ತಪ್ಪಿಸಿಕೊಳ್ಳುತ್ತಾ ಅಂಡಲೆಯುತ್ತಿರುತ್ತದೆ.

ii. ಥಟ್ಟನೆ ಉದ್ರೇಕಗೊಳ್ಳುತ್ತದೆ. ತನ್ನ ದಾರಿಯಲ್ಲಿ ಕಂಡ ಯಾವುದೇ ವಸ್ತುವನ್ನು ಕಡಿಯುತ್ತದೆ ಅಥವಾ ಕಚ್ಚುತ್ತಾ ಒಮ್ಮೊಮ್ಮೆ ನುಂಗಿಬಿಡಬಹುದು.

ಪಶುವೈದ್ಯರು ಸತ್ತನಾಯಿಗಳ ಶವಪರೀಕ್ಷೆ ಮಾಡಿದಾಗ ನಾಯಿಯಹೊಟ್ಟೆಯಲ್ಲಿ ಕಲ್ಲು, ಗಾಜು ಇತರೆ ಪದಾರ್ಥಗಳು ಕಂಡುಬಂದರೆ ರೇಬೀಸ್ ಕಾಯಿಲೆಯಿಂದಲೇ ನಾಯಿ ಸತ್ತಿರಬಹುದೆಂದು ಶಂಕಿಸುತ್ತಾರೆ.

iii. ಕಾರಣವಿಲ್ಲದೆ ಎಡೆಬಿಡದೆ ಚಲಿಸುತ್ತಿರುತ್ತದೆ ಹಾಗು ಪದೇ ಪದೇ ಬೊಗಳುತ್ತಿರುತ್ತದೆ.

iv. ದೇಹವು ಸೂಕ್ಷ್ಮವಾದ ಕಂಪನಕ್ಕೊಳಗಾಗುತ್ತದೆ. ಜೊತೆಗೆ ಉಕ್ಕುಕ್ಕಿ ಬರುವ ಸೆಳೆವಿನೊಂದಿಗೆ ಸ್ನಾಯುಗಳು ಸಂಕುಚಿತಗೊಳ್ಳುತ್ತವೆ.

v. ಮೇಲೆ ವಿವರಿಸಿದಂತೆ ವಿಕೃತವಾಗಿ ತಿನ್ನುವ ಬಯಕೆಯನ್ನು ತೋರಿಸುತ್ತದೆ. ಯಾವುದೇ ಕಂಡ ವಸ್ತುವನ್ನು ಜಗಿದು ನುಂಗಿಬಿಡುತ್ತದೆ.

vi. ದೂರ ದೂರ ಅಂಡಲೆಯುತ್ತ ಮನೆಗೆ ವಾಪಸ್ಸಾಗದೆ ಇರಬಹುದು.

**ಮೂರನೆಯ ಹಂತ**

i. ಸ್ನಾಯುಗಳಿಗೆ, ಹಿಂಗಾಲುಗಳಿಗೆ ಲಕ್ವ ಹೊಡೆಯುತ್ತದೆ.

ii. ತೆರೆದ ಬಾಯಿಯಿಂದ ಅತಿರೇಕವಾಗಿ ಜೊಲ್ಲು ಸುರಿಸುತ್ತದೆ, ಉಗ್ರ ನಡುಕವು ಕಂಡು ಬರಬಹುದು.

iii. ಬೊಗಳುವಿಕೆ ಕರ್ಕಶವಾಗಬಹುದು ಅಥವಾ ಧ್ವನಿ ಹೊರಟು ಹೋಗುತ್ತದೆ.

iv. ಹೊರಚಾಚಿದ ನಾಲಿಗೆಯೊಂದಿಗೆ ಕೆಳದವಡೆ ಜೋತು ಬೀಳಬಹುದು.

v. ತಲೆಯ ಜಡತೆಯಿಂದ ಕೆಳಗೆ ವಾಲಬಹುದು, ಇಲ್ಲವೆ ಅಸಾಮಾನ್ಯ ಕೋನದಲ್ಲಿ ತಿರುಚಿಕೊಂಡಿರಬಹುದು.

vi. ಹಿಂದಣ ಕಾಲುಗಳು ನಿಶ್ಶಕ್ತವಾಗುತ್ತ ಕೊನೆಗೆ ದೇಹ ಭಾರ ತಡೆದುಕೊಳ್ಳಲು ಅಸಮರ್ಥವಾಗಿ ನಿಲ್ಲಲು ಪ್ರಯತ್ನಿಸುತ್ತ ಕುಸಿದು ಬೀಳುತ್ತಿರುತ್ತದೆ.



**ಚಿತ್ರ 5.2 ತೆರೆದ ಬಾಯಿಯಿಂದ ಜೊಲ್ಲು ಸುರಿಸುತ್ತಿರುವ ರೇಬೀಸ್ ಹುಚ್ಚುನಾಯಿ**

ಇದಾದ ಕೂಡಲೆ ನಾಯಿಯು ಸಾಯುತ್ತದೆ. ಸಾಮಾನ್ಯವಾಗಿ ಇಂತಹ ಈ ನಾಯಿಯು 5 ರಿಂದ 10 ದಿನಗಳವರೆಗೆ ಬದುಕಿರುತ್ತದೆ. ಆದರೆ ಅತಿ ವಿರಳ ಸಂದರ್ಭದಲ್ಲಿ ಹತ್ತು ದಿನಗಳ ಮೇಲೂ ನಾಯಿ ಬದುಕಿರಬಹುದು.

## ಆ. ಮೂಕ ರೇಬೀಸ್

ಮೂಕ ರೇಬೀಸ್‌ನಲ್ಲಿ ಉಗ್ರ ಲಕ್ಷಣಗಳ ಬದಲು ಸೌಮ್ಯ ಚಿಹ್ನೆಗಳು ಕಂಡುಬರುತ್ತವೆ.

i. ನಾಯಿ ಆಲಸಿಯಾಗುತ್ತದೆ.

ii. ಕೂಡಲೇ ಉಂಟಾಗುವ ನಡುಕ ಮತ್ತು ಪಕ್ಷಪಾತಗಳ ಹಿನ್ನಲೆಯಿಂದಾಗಿ ನಾಯಿ ಅತಿ ಸುಸ್ತಿನಿಂದಾಗಿ ನೆಲದಲ್ಲಿ ಮಲಗಿಬಿಡುತ್ತದೆ.

iii. ನಿತ್ರಾಣದಿಂದ ಮಲಗಿದ ನಾಯಿ ಎರಡು ದಿನಗಳ ನಂತರ ಸಾಯುತ್ತದೆ.

## ೫.೪ ಬೆಕ್ಕಿನಲ್ಲಿ ರೇಬೀಸ್

ಬೆಕ್ಕಿನಲ್ಲಿ ರೇಬೀಸ್ ಸಾಮಾನ್ಯವಾಗಿ ಉಗ್ರರೂಪದಲ್ಲಿ ಕಾಣುತ್ತದೆ. ಅಪರೂಪಕ್ಕೆ ಮೂಕ ರೂಪದಲ್ಲಿ ಕಾಣುತ್ತದೆ.ರೇಬೀಸ್ ಬೆಕ್ಕು ಎರಡು ಕಾಲ ಮೇಲೆ ನಿಂತು ಗಾಳಿಯಲ್ಲಿ ಏನೇನೋ ಹೊಡೆಯುವಂತೆ ವರ್ತಿಸುತ್ತದೆ. ಕ್ರಮೇಣವಾಗಿ ನಿತ್ರಾಣ ಬಂದು ಲಕ್ವ ಹೊಡೆದು ಕೊನೆಗೆ ಸಾಯುತ್ತದೆ. ಸಾಮಾನ್ಯವಾಗಿ ಇದು ಕೂಡ ನಾಯಿಯಂತೆ 5-10 ದಿನಗೊಳಗಾಗಿ ಸಾಯುತ್ತದೆ.

## ೫.೫ ಹಸುವಿನಲ್ಲಿ ರೇಬೀಸ್

ಹುಚ್ಚು ನಾಯಿಯಿಂದ ಕಚ್ಚಿಸಿಕೊಂಡ ಹಸುವು ರೋಗ ಪಕ್ವ ಸ್ಥಿತಿಯ ಕಾಲದ ನಂತರ ಅತಿ ಸೌಮ್ಯಗೊಂಡು, ಜ್ವರದಿಂದ ಬಳಲುತ್ತದೆ. ಹಾಲು ಕಡಿಮೆ ಕೊಡುವುದು, ನಿಲ್ಲಲು ಹಾಗು ನಡೆಯಲು ಸಾಧ್ಯವಾಗದೆ, ನಿತ್ರಾಣಗೊಂಡು, ಕೊನೆಗೆ ನೆಲವನ್ನಪ್ಪಿ ಸಾಯುತ್ತದೆ. ಇದೇ ಲಕ್ಷಣಗಳು ಇತರೇ ಪ್ರಾಣಿಗಳಾದ ಕುರಿ, ಮೇಕೆ, ಎಮ್ಮೆ, ಕುದುರೆ ಹಾಗು ಕತ್ತೆಗಳಲ್ಲೂ ಸಹ ಕಾಣುತ್ತದೆ. ಆದರೆ ಈ ಯಾವ ಪ್ರಾಣಿಗಳೂ ಸಾಮಾನ್ಯವಾಗಿ ಮನುಷ್ಯನನ್ನು ಕಚ್ಚುವುದಿಲ್ಲ. ಆದರೆ ರೇಬೀಸ್ ಹಸುವಿನ ಹಾಲಿನಲ್ಲಿ ರೇಬೀಸ್ ರೋಗಾಣು ಇರುತ್ತದೆ. ಹಾಲನ್ನು ಕುದಿಸಿ ಕುಡಿದಿದ್ದರೆ ಏನೂ ಅಪಾಯ ಇರುವುದಿಲ್ಲ. ಆದರೆ ಹಸಿ ಹಾಲನ್ನು ಕುಡಿದಿದ್ದರೆ ಅಥವಾ ಕುದಿಸದೆ ಕುಡಿದಿದ್ದರೆ ರೋಗ ನಿರೋಧಕ ಚುಚ್ಚು ಮದ್ದನ್ನು ಹಾಲು ಸೇವಿಸಿದವರಿಗೆ ಕೊಡಬೇಕಾಗುತ್ತದೆ.

ಈ ಕೆಲವು ರೇಬೀಸ್ ಪ್ರಾಣಿಗಳ ಮಾಂಸವನ್ನು ಬೇಯಿಸಿ ತಿಂದ

ಜನರಿಗೆ ಕಡಿಮೆ ಗಂಟಾಂತರ ಎಂದು ನಿರ್ಧರಿಸಿ ಅದರ ವೇಳಾಪಟ್ಟಿಯಂತೆ ರೋಗ ನಿರೋಧಕ ಲಸಿಕೆ ಚುಚ್ಚು ಮದ್ದನ್ನು ಕೊಡಬೇಕಾಗುತ್ತದೆ.

## ೫.೬ ಇತರೇ ಪ್ರಾಣಿಗಳು

ಸಾಕಿದ ಕೋತಿ, ಇತರೇ ಸಾಕಿದ ಪ್ರಾಣಿಯು ಹುಚ್ಚು ನಾಯಿಯಿಂದ ಕಚ್ಚಲ್ಪಟ್ಟರೆ ಅವಕ್ಕೆ ಕಾಯಿಲೆ ಬಂದರೆ ತಕ್ಷಣ ಪಶುವೈದ್ಯರ ಸಲಹೆ ಪಡೆಯುವುದು ಒಳ್ಳೆಯದು. ಇದಲ್ಲದೆ ಯಾವುದೇ ಸಾಕಿದ ಪ್ರಾಣಿಗೆ ಕಾಯಿಲೆ ಬಂದರೆ ಪಶು ವೈದ್ಯರಿಗೆ ತೋರಿಸಿ ರೇಬೀಸ್ ಇಲ್ಲದಿರುವುದನ್ನು ಖಚಿತಪಡಿಸಿಕೊಳ್ಳುವುದು ಮುನ್ನೆಚ್ಚರಿಕೆಯ ಕ್ರಮ.

ಹೊಲಗಳಲ್ಲಿ ಹೆಗ್ಗಣ, ಅಳಿಲು, ಹಾಗು ಪಕ್ಷಿಗಳು ಕಚ್ಚಿದಲ್ಲಿ/ ಕುಕ್ಕಿದಲ್ಲಿ ಸಾಮಾನ್ಯವಾಗಿ ಆಂಟೀರೇಬೀಸ್ ಚಿಕಿತ್ಸೆ ಬೇಕಾಗುವುದಿಲ್ಲ.

ಮನೆಯಲ್ಲಿನ ಹೆಗ್ಗಣ, ಮೊಲ, ಜಿಂಕೆ ಇತರೆ ಪ್ರಾಣಿಗಳು ವಿನಾಃಕಾರಣ ಕಚ್ಚಿದರೆ, ಹಾಗು ಅವುಗಳಲ್ಲಿ ಏನಾದರೂ ಅನಾರೋಗ್ಯ ಕಂಡರೆ ವೈದ್ಯರ ಸಲಹೆ ಮೇರೆಗೆ ಆಂಟಿರೇಬೀಸ್ ಚಿಕಿತ್ಸೆ ಪಡೆಯಬೇಕಾಗಬಹುದು.

## ೫.2 ಪ್ರಯೋಗ ಶಾಲೆಯ ಖಚಿತ ನಿರ್ಧಾರ

ಯಾವುದೇ ಅನುಮಾನಾಸ್ಪದ ರೇಬೀಸ್ ಸೋಂಕಿರುವ ಪ್ರಾಣಿಯನ್ನು (ಸಾಮಾನ್ಯವಾಗಿ ನಾಯಿ, ಬೆಕ್ಕು, ಹಾಗು ಇತರೇ ಸಾಕಿದ ಪ್ರಾಣಿಗಳನ್ನು) ಹತ್ತು ದಿನಗಳವರೆಗೆ ಪ್ರತ್ಯೇಕಿಸಿ ಅದನ್ನು ರೋಗ ಲಕ್ಷಣಗಳ ಬಗ್ಗೆ ನಿಗಾ ಇಟ್ಟು ಗಮನಿಸಬೇಕು. ಸಾಧ್ಯವಾದಲ್ಲಿ ಪಶುವೈದ್ಯರ ಸಲಹೆ ಪಡೆಯಬೇಕು. ಇಂತಹ ಪ್ರಾಣಿ ಸತ್ತಲ್ಲಿ ಅದನ್ನು ಖಂಡಿತವಾಗಿ ಪ್ರಯೋಗಶಾಲೆಯ ಪರೀಕ್ಷೆಗೆ ಒಳಪಡಿಸಬೇಕು. ಸಾಧ್ಯವಾದಲ್ಲಿ ಸತ್ತ ಪ್ರಾಣಿಯ ದೇಹವನ್ನು ಪ್ರಯೋಗಶಾಲೆಗೆ ರವಾನಿಸಬೇಕು. ಇಲ್ಲವಾದಲ್ಲಿ ಪಶುವೈದ್ಯರ ಸಹಾಯದಿಂದ ಅದರ ತಲೆಯನ್ನು ಮಾತ್ರ ಬೇರ್ಪಡಿಸಿ ಅದನ್ನು ಈ ರೀತಿಯಲ್ಲಿ ಗಂಟು ಕಟ್ಟಬೇಕು.

ಅ. ಪ್ರಾಣಿಯ ತಲೆಯನ್ನು ಒಂದು ಪಾಲಿಥಿಲೀನ್ ಚೀಲದಲ್ಲಿ ಹಾಕಿ ಕಟ್ಟಬೇಕು.

ಆ. ಇನ್ನೊಂದು ದೊಡ್ಡ ಪಾಲಿಥಿಲೀನ್ ಚೀಲದಲ್ಲಿ ಒಣ ಮಂಜುಗಡ್ಡೆಯನ್ನು ಹಾಕಿ, ತಲೆಯಿರುವ ಚೀಲವನ್ನು ಅದರಲ್ಲಿ ಹಾಕಿ ಕಟ್ಟಬೇಕು.

ಇ. ಈ ಗಂಟು ಕಟ್ಟನ್ನು ಥರ್ಮೋಕೋಲ್ ಡಬ್ಬದಲ್ಲಿ ಹಾಕಿ, ವಿವರಗಳ ಪಟ್ಟಿಯನ್ನು ಹಾಕಿ, ಮೊಹರು ಹಾಕಿ, ಎಚ್ಚರಿಕೆಯಿಂದ ಪಶುವೈದ್ಯರ ಸಲಹೆಯಂತೆ ಅದನ್ನು ಹತ್ತಿರದ ಪ್ರಯೋಗಶಾಲೆಗೆ ರವಾನಿಸಬೇಕು.

ಈ ಪ್ರಯೋಗ ಶಾಲೆಗಳಲ್ಲಿ ಇದನ್ನು ಈ ಪರೀಕ್ಷೆಗಳಿಗೆ ಒಳಪಡಿಸಿ ಖಚಿತ ನಿರ್ಧಾರವನ್ನು ತಿಳಿಸಬಹುದು.

i. ಸೆಲ್ಲರ್ ರಂಗು (SELLER'S STAIN) ಪರೀಕ್ಷೆ.

ii. ಕಾಂತಿಯುತ ಸೂಕ್ಷ್ಮದರ್ಶಕ ರಕ್ಷಣಾವಸ್ತು ಪರೀಕ್ಷೆ (Fluoroscent antibody test - FAT)

iii. ಪ್ರಾಣಿಗಳ ಮೇಲೆ ಪ್ರಯೋಗ (Biological test)



ಚಿತ್ರ 5.3 ಮಿದುಳಿನ ನರಕಣದೊಳಗೆ "ನೆಗ್ರಿಸತ್ವ" (ಸೂಕ್ಷ್ಮದರ್ಶಕದ ಮೂಲಕ)

1 ದಿನದಿಂದ - 21 ದಿನಗಳೊಳಗೆ (ಪರೀಕ್ಷೆಯ ವಿಧಾನದ ಮೇಲೆ ಅವಲಂಬಿಸಿರುತ್ತದೆ) ರೇಬೀಸ್ ರೋಗದ ತೀರ್ಪನ್ನು ತಿಳಿಸಬಹುದು.

ರೇಬೀಸ್ ಪ್ರಾಣಿಯ ಮಿದುಳಿನ ಲೇಪನವನ್ನು ಗಾಜಿನ ಪಟ್ಟಿಯಲ್ಲಿ (Slide) ಸೆಲ್ಲರ್ ರಂಗಿನ ಲೇಪನದಿಂದ ಸೂಕ್ಷ್ಮದರ್ಶಕದಲ್ಲಿ ಪರೀಕ್ಷಿಸಿದರೆ ಅದರ ನರಕಣದೊಳಗೆ ಗುಲಾಬಿ ಬಣ್ಣದ ಗುಂಡಿನಾಕಾರದ ಅಂಶವು ಕಾಣುತ್ತದೆ. ಇದು ರೇಬೀಸ್ ವಿಷಾಣುವಿನ ಅಂಶವಿದ್ದು ಇದನ್ನು ನೆಗ್ರಿಸತ್ವ ಎಂದು ಕರೆಯುತ್ತಾರೆ. ಇದುಪ್ರಯೋಗಶಾಲೆಯಲ್ಲಿ ಅತಿ ಮುಖ್ಯ ರೇಬೀಸ್ ರೋಗ ನಿರ್ಧಾರಕ ಚಿಹ್ನೆಯಾಗಿರುತ್ತದೆ.

## ೫.೮ ಪ್ರಾಣಿಗಳಿಗೆ ರೇಬೀಸ್ ರೋಗನಿರೋಧಕ ಲಸಿಕೆ

ಸಾಕಿದ ಪ್ರಾಣಿಗಳಿಗೆ ಮುಂಜಾಗ್ರತೆ ಲಸಿಕೆ ಸಂರಕ್ಷಣೆ ನೀಡಬೇಕು. ಈ ರೀತಿ ಸಂರಕ್ಷಿಸದಿರುವ ಪ್ರಾಣಿಗೆ ಯಾವುದೇ ಹುಚ್ಚು ಪ್ರಾಣಿ ಕಚ್ಚಿದರೆ ಅಂತಹ ಪ್ರಾಣಿಯನ್ನು ಕೊಲ್ಲುವುದು ಅನಿವಾರ್ಯವಾಗುತ್ತದೆ. ಆದರೆ ಇದು ದಿನನಿತ್ಯದಲ್ಲಿ ಸಾಧ್ಯವಾಗುವುದಿಲ್ಲ. ಹಾಗು ಸಾಕಿದವರು ಒಪ್ಪುವುದಿಲ್ಲ. ಆದುದರಿಂದ ಮುಂಜಾಗ್ರತೆ ಸಂರಕ್ಷಣೆಅತಿ ಮುಖ್ಯ. ಈ ವಿಧಾನಕ್ಕೆ ಎರಡು ರೀತಿಯ ಲಸಿಕೆಗಳು ಲಭ್ಯವಿದೆ.

i. ನರಸತ್ವ ಲಸಿಕೆ

ii. ಅಂಗಸತ್ವ ಲಸಿಕೆ

## ೫.೮.೧ ನರಸತ್ವ ಲಸಿಕೆ (ಪ್ರಾಣಿಯದು)

ಮನುಷ್ಯನ ನರಸತ್ವ ಲಸಿಕೆಯಂತೆ ಈ ಪ್ರಾಣಿಯ ನರಸತ್ವ ಲಸಿಕೆಯನ್ನು ಕುರಿಯ ಮಿದುಳಿನಲ್ಲಿ ರೇಬೀಸ್‌ವೈರಸ್ ವಿಷಾಣುಗಳನ್ನು ಬೆಳಸಿ ನಂತರ ಅವುಗಳನ್ನು ಬಿ.ಪಿ.ಎಲ್ (ಬೀಟಾ ಪ್ರಾಪಿಯೋಲ್ಯಾಕ್ಟೋನ್) ಎನ್ನುವ ರಸಾಯನಿಕವನ್ನು ಉಪಯೋಗಿಸಿ ನಿಷ್ಕ್ರಿಯಗೊಳಿಸಿ ಲಸಿಕೆಯನ್ನು ತಯಾರಿಸುತ್ತಾರೆ.

ಸಾಮಾನ್ಯವಾಗಿ ನಾಯಿ ಹಾಗೂ ಬೆಕ್ಕುಗಳಿಗೆ ಎರಡು ತಿಂಗಳ ವಯಸ್ಸಿನ ಮೊದಲು ದೈಹಿಕ ರೋಗ ನಿರೋಧಕಶಕ್ತಿ/ವ್ಯವಸ್ಥೆ ಇನ್ನು



**ಚಿತ್ರ 5.4 ನರಸತ್ವ ಲಸಿಕೆ (ಪ್ರಾಣಿಗಳಿಗೆ ಹಾಗು ಮನುಷ್ಯನಿಗೆ) ತಯಾರಿಕೆಗೆ ಉಪಯೋಗಿಸುವ ಕುರಿ.**

ಪಕ್ವಗೊಂಡಿರುವುದಿಲ್ಲ. ಆದುದರಿಂದ ಲಸಿಕೆ ನೀಡಿದರೆ ರಕ್ಷಣಾವಸ್ತು ಉತ್ಪಾದನೆಗೊಳ್ಳುವುದಿಲ್ಲ, ಹಾಗು ರೇಬೀಸ್ ವಿರುದ್ಧ ರಕ್ಷಣೆ ಬರುವುದಿಲ್ಲ. ಇದರಿಂದ ಸಾಕಿದ ಯಜಮಾನನಿಗೆ ಪೊಳ್ಳು ಆಶ್ವಾಸನೆ ಹಾಗು ರಕ್ಷಣಾ ಭರವಸೆ ಬರುತ್ತದೆ. ಆದುದರಿಂದ ಎರಡು ತಿಂಗಳ ಬಳಿಕ (ಒಮ್ಮೊಮ್ಮೆ ಆರು ತಿಂಗಳ ಬಳಿಕ) ಈ ರಕ್ಷಣಾ ಲಸಿಕೆ ನೀಡಲಾಗುತ್ತದೆ. ಈ ಲಸಿಕೆಗಳನ್ನು ತಯಾರಿಸುವ ಸಂಸ್ಥೆಗಳ ವಿವರಗಳನ್ನು ಮೂರನೆಯ ಅನುಬಂಧದಲ್ಲಿ ನೀಡಲಾಗಿದೆ.

## ನರಸತ್ವ ಲಸಿಕೆಯ ಚುಚ್ಚುಮದ್ದು ವೇಳಾಪಟ್ಟಿ

| ಲಸಿಕೆ | ಸಂಯೋಗ | ಪ್ರಾಣಿ ಹಾಗು ಲಸಿಕೆ ವಿಧಾನ | ಮರು ಲಸಿಕೆ ಪ್ರದಾನ |
|---|---|---|---|
| 1. ಜೀವಂತ ವೈರಸ್‌ಪಕ್ಷಿಯ ಲಸಿಕೆ | 33% ಕೋಳಿ ಭ್ರೂಣ ಅಳವಡಿಸಿದ ಬದಲಾದವೈರಸ್ | ನಾಯಿ: 3 ಮಿಲೀ (ಒಂದು ಗುಟುಕು)ಬೆಕ್ಕು ಹಾಗು ಪುಟ್ಟನಾಯಿ 1.5 ಮಿಲೀ. (ಒಂದು ಗುಟುಕು) | 3 ವರ್ಷಕ್ಕೆ ಒಮ್ಮೆ |

| | | | |
|---|---|---|---|
| 2. ನಿಷ್ಕ್ರಿಯ ಗೊಂಡ ವೈರಸ್ (BPL)ಬಿ.ಪಿ.ಎಲ್ ಲಸಿಕೆ (ಒಂದು ಗುಟುಕು) | 20% ರಸಾಂಶದ ಕುರಿಯ) ಮಿದುಳಿನ ಲಸಿಕೆ | ನಾಯಿ: 5ಮಿಲೀ (ಒಂದು<br>ಬೆಕ್ಕು: 3ಮಿಲೀ<br>(ಒಂದು ಗುಟುಕು)<br>ಮೇವು ಸಾಕಿದ ಪ್ರಾಣಿಗಳು<br><100ಕಿ.ಗ್ರಾಂ. ತೂಕದ್ದು<br>–10ಮಿಲಿ.(ಒಂದು ಗುಟುಕು)<br>>100ಕಿ.ಗ್ರಾಂ. ತೂಕದ್ದು<br>–20ಮಿಲಿ.(ಒಂದು ಗುಟುಕು) | 6 ತಿಂಗಳ ನಂತರ ಒಂದು ಗುಟುಕು ಲಸಿಕೆ ನಂತರ ಪ್ರತಿ ವರ್ಷ ಒಂದು ಗುಟುಕು |
| 3. ನಿಷ್ಕ್ರಿಯ ಗೊಳಿಸಿದ ವೈರಸ್B.P.L ಲಸಿಕೆ (ಬಹು ಗುಟುಕು)* | 5% ರಸಾಂಶದ ಕುರಿಯ ಮಿದುಳಿನ ಲಸಿಕೆ | ನಾಯಿ ಹಾಗು ಬೆಕ್ಕು<br>(<15 ಕಿ.ಗ್ರಾಂ ತೂಕ)<br>2 ಮಿ.ಲಿ x 7 ದಿನಗಳು<br>ನಾಯಿ (>15 ಕಿ.ಗ್ರಾಂ<br>ತೂಕ) 5 ಮಿಲಿ x 7 ದಿನಗಳು<br>ಹಸು, ಕುದುರೆ, ಹಂದಿ,<br>ಇತರೆ ಪ್ರಾಣಿಗಳು<br>2 ಮಿಲಿ x 7 ದಿನಗಳು<br>(<15 ಕಿ.ಗ್ರಾಂ ತೂಕ)<br>5 ಮಿಲಿ x 7 ದಿನಗಳು<br>(15-100 ಕಿ. ಗ್ರಾಂ ತೂಕ)<br>15 ಮಿಲಿ x 7 ದಿನಗಳು<br>(101-800 ಕಿ.ಗ್ರಾಂ ತೂಕ)<br>30 ಮಿಲಿ x 7 ದಿನಗಳು<br>(> 800 ಕಿ.ಗ್ರಾಂ ತೂಕ) | ಪ್ರತಿ ವರ್ಷ ಒಂದು ಗುಟುಕು |

ಟಿಪ್ಪಣಿ:–

* ಈ ಲಸಿಕೆಯನ್ನು ಆರೋಗ್ಯವಾದ ಪ್ರಾಣಿಗೆ (ಹುಚ್ಚು ಪ್ರಾಣಿ ಕಚ್ಚಿದ ನಂತರ) ರೇಬೀಸ್ ವಿರುದ್ಧ ಸಂರಕ್ಷಣೆಗೆ ಕೊಡಬಹುದು.

ಅ. ಆರೋಗ್ಯವಂತ ಪ್ರಾಣಿ ಮೊದಲು ಮುಂಜಾಗ್ರತೆ ಲಸಿಕೆ ಪಡೆದಿದ್ದರೆ 7 ಗುಟುಕನ್ನು,

ಆ. ಪಡೆಯದಿದ್ದರೆ 14 ಲಸಿಕೆ ಗುಟುಕನ್ನು ಪ್ರತಿದಿನ ಒಂದರಂತೆ ಕೊಡಬೇಕಾಗುತ್ತದೆ.




**ಚಿತ್ರ 5.5 ರೇಬೀಸ್ ನಿರೋಧಕ ಲಸಿಕೆಗಳು(ಪ್ರಾಣಿಗಳಿಗೆ)**
**– ನರಸತ್ವ ಲಸಿಕೆ (ಎಡಗಡೆ); ರ್‍ಯಾಬಿಸಿನ್ ಕೃಷಿ ಲಸಿಕೆ(ಮಧ್ಯದಲ್ಲಿ); ನೋಬಿವ್ಯಾಕ್**
**– ಆರ್ ಕೃಷಿಲಸಿಕೆ (ಬಲಗಡೆ)**

೯. ಏನಾದರೂ ಸಂದೇಹ ಬಂದರೆ ಲಸಿಕೆ ತಯಾರಕರ ವಿವರಣಾ ಚೀಟಿ (Product Literature) ಅಥವ ಪಶುವೈದ್ಯರ ಸಲಹೆ ಪಡೆಯುವುದು ಉತ್ತಮ.

## ೫.೮.೨ ಅಂಗ ಸತ್ವ ಕೃಷಿ ಲಸಿಕೆ

ಮನುಷ್ಯನಿಗೆ ನೀಡುವ ಅಂಗಸತ್ವ ಕೃಷಿ ಲಸಿಕೆಗಳಂತೆ ಪ್ರಾಣಿಗಳಿಗೆ ನೀಡುವ ಅಂಗಸತ್ವ ಕೃಷಿ ಲಸಿಕೆಗಳು ಪ್ರತ್ಯೇಕವಾಗಿ ಮಾರುಕಟ್ಟೆಯಲ್ಲಿ ದೊರಕುತ್ತವೆ. ಆದರೆ ಇವುಗಳ ಬೆಲೆ ಸ್ವಲ್ಪ ದುಬಾರಿ. ಆದರೆ ಈ ಲಸಿಕೆಗಳು ನರಸತ್ವ ಲಸಿಕೆಗಳಿಗಿಂತ ಹೆಚ್ಚು ಸುರಕ್ಷಿತ ಹಾಗು ಹೆಚ್ಚು ರಕ್ಷಣಾತ್ಮಕ. ಇವುಗಳನ್ನು ಖಾಸಗಿ ಪಶು ಔಷಧ ಸಂಸ್ಥೆಗಳು ತಯಾರಿಸುತ್ತಿವೆ/ ಆಮದು ಮಾಡಿಕೊಳ್ಳುತ್ತಿವೆ. ಈ ಲಸಿಕೆಗಳನ್ನು ಕೂಡ ಮುಂಜಾಗ್ರತೆ ಲಸಿಕಾ ರಕ್ಷಣೆಗೆ ಶಿಫಾರಸು ಮಾಡಲಾಗಿದೆ. ಅದರೆ ಕಚ್ಚಿದ ನಂತರ ಇವುಗಳನ್ನು ರಕ್ಷಣೆಗೂ ಬಳಸಲಾಗುತ್ತದೆ. ಈ ಲಸಿಕೆಗಳನ್ನು ಅತಿಸಣ್ಣ ವಯಸ್ಸಿಗೂ (>1 ತಿಂಗಳು) ನೀಡಲು ಶಿಫಾರಸು ಮಾಡಲಾಗಿದೆ.

| ಲಸಿಕೆ ಹಾಗು ಸಂಸ್ಥೆ | ಹುಚ್ಚು ಮದ್ದು ಲಸಿಕೆ ವೇಳಾಪಟ್ಟಿ | ಒಂದು ಗುಟುಕಿನ ಅಂದಾಜು ಬೆಲೆ |
| --- | --- | --- |
| 1. **ರ್‍ಯಾಬಿಸಿನ್.** ಭಾರತೀಯ ಸೀರಮ್‌ಸಂಸ್ಥೆ, ಪೂನ. | **ನಾಯಿ ಮತ್ತು ಬೆಕ್ಕು**<br>>2 ತಿಂಗಳು ವಯಸ್ಸು–ಮೊದಲ ಗುಟುಕು<br>ಒಂದು ತಿಂಗಳ ನಂತರ–ಎರಡನೇ ಗುಟುಕು<br>ಒಂದು ವರ್ಷದ ನಂತರ–ಮೂರನೇ ಗುಟುಕು<br>ಪ್ರತಿ ಮೂರು ವರ್ಷಕ್ಕೊಮ್ಮೆ ಮರು ಗುಟುಕು<br>**ಇತರೇ ಪ್ರಾಣಿಗಳಿಗೆ**<br>>2 ತಿಂಗಳ ವಯಸ್ಸು–ಮೊದಲ ಗುಟುಕು<br>ಒಂದು ವರ್ಷದ ನಂತರ–ಎರಡನೇ ಗುಟುಕು<br>ಪ್ರತಿ ಮೂರು ವರ್ಷಕ್ಕೊಮ್ಮೆ ಮರು ಗುಟುಕು. | ರೂ.70/- |
| 2. **ರಕ್ಷಾರಾಬ್** ಭಾರತೀಯ ಇಮ್ಯಾಲಾಜಿಕಲ್ಸ್ ಹೈದರಾಬಾದ್ | ನಾಯಿ ಮತ್ತು ಬೆಕ್ಕು<br>>3 ತಿಂಗಳು ವಯಸ್ಸು–ಮೊದಲ ಗುಟುಕು<br>ಪ್ರತಿ ಎರಡು ವರ್ಷಕ್ಕೆ–ಮರು ಗುಟುಕು | ರೂ.70/- |
| 3. **ನೋಬಿವಾಕ್** –ಆರ್ ಇಂಟರ್‌ಕೇರ್ ಕಲ್ಕತ್ತ | ನಾಯಿ ಮತ್ತು ಬೆಕ್ಕು<br>3 ತಿಂಗಳು ವಯಸ್ಸು–ಮೊದಲ ಗುಟುಕು<br>ಪ್ರತಿ ವರ್ಷ ಒಂದು ಮರು ಗುಟುಕು<br>**ಇತರೇ ಪ್ರಾಣಿಗಳು**<br>6 ತಿಂಗಳ ವಯಸ್ಸು – ಮೊದಲ ಗುಟುಕು<br>ಪ್ರತಿ ವರ್ಷ ಒಂದು ಮರು ಗುಟುಕು | ರೂ.200/- |

**ಟಿಪ್ಪಣಿ**

ಈ ಲಸಿಕೆಗಳನ್ನು ಆರೋಗ್ಯವಂತ ನಾಯಿಗೆ/ಬೆಕ್ಕಿಗೆ ಹುಚ್ಚು ಪ್ರಾಣಿ ಕಚ್ಚಿದ ನಂತರ ಚಿಕಿತ್ಸೆಗಾಗಿ ಈ ವೇಳಾಪಟ್ಟಿಯಂತೆ ಉಪಯೋಗಿಸಬಹುದು – ದಿನ 0, 3, 7, 14, 30 ಹಾಗು 90 (ಒಟ್ಟು ಆರು ಗುಟುಕುಗಳು)

ಹಾಗು ಅಂತಹ ಪ್ರಾಣಿಗಳನ್ನು ಪ್ರತ್ಯೇಕಿಸಿ ನಿಗಾವಣೆಯಲ್ಲಿ ಇಡುವುದು ಸೂಕ್ತ. ಅವುಗಳ ಆರೋಗ್ಯದ ಬಗ್ಗೆ ಅನುಮಾನ ಬಂದರೆ ತಕ್ಷಣ ಪಶು ವೈದ್ಯರ ಸಲಹೆ ಪಡೆಯುವುದು ಸೂಕ್ತ.



ಚಿತ್ರ 56 ಆಧುನಿಕ ಕೃಷಿ ಲಸಿಕೆಗಳನ್ನು ತಯಾರಿಸುವ ಯಂತ್ರಾಗಾರ
(ಮೂಲ: ಪಾಶ್ಚರ್ ಮಾರಿಯೊ)

# ೬. ರೇಬೀಸ್ ರೋಗ ನಿಯಂತ್ರಣ

## ೬.೧ ರೇಬೀಸ್ ರೋಗ ನಿಯಂತ್ರಣ

ಇಂದು ಮುಂದುವರಿದ ರಾಷ್ಟ್ರಗಳಲ್ಲಿ ರೇಬೀಸ್ ರೋಗ ನಿಯಂತ್ರಣಗೊಂಡು, ಕೆಲವೆಡೆ ನಿರ್ನಾಮಗೊಂಡಿದೆ. ಕೆಲವು ರಾಷ್ಟ್ರಗಳಲ್ಲಿ ಜನನಿಬಿಡಿತ ಪ್ರದೇಶಗಳಲ್ಲಿ ರೇಬೀಸ್ ನಿಯಂತ್ರಣಗೊಂಡಿದೆ. ಅರಣ್ಯಪ್ರದೇಶಗಳಲ್ಲಿ ಕಾಡುಪ್ರಾಣಿಗಳಲ್ಲಿ ರೇಬೀಸ್ ನಿಯಂತ್ರಿಸಲು ಹೆಲಿಕಾಪ್ಟರ್ ಬಳಸಿ ಲಸಿಕೆ ಗಾಳಗಳನ್ನು ಸಿಂಪಡಿಸಿ ಕಾಡುಪ್ರಾಣಿಗಳಿಗೆ ರೋಗ ನಿರೋಧಕ ಶಕ್ತಿಯನ್ನು ನೀಡಿ ರೇಬೀಸ್ ಕಾಯಿಲೆಯನ್ನು ತಡೆಗಟ್ಟಲಾಗುತ್ತಿದೆ. ಉದಾ: ಫ್ರಾನ್ಸ್ ಹಾಗೂ ಸ್ವಿಟ್ಜರ್‌ಲ್ಯಾಂಡ್.

ಇನ್ನು ಅಭಿವೃದ್ಧಿ ಹೊಂದುತ್ತಿರುವ ಏಷ್ಯಾ, ಆಫ್ರಿಕಾ ಮತ್ತು ಲ್ಯಾಟಿನ್ ಅಮೆರಿಕ ಖಂಡಗಳ ರಾಷ್ಟ್ರಗಳು, ಅದರಲ್ಲೂ ಭಾರತದಲ್ಲಿ ರೋಗ ನಿಯಂತ್ರಣಕ್ಕೆ ಕಾರ್ಯಕ್ರಮಗಳನ್ನು ತೀವ್ರಗತಿಯಲ್ಲಿ ರೂಪಿಸಲಾಗುತ್ತಿಲ್ಲ. ದುರದೃಷ್ಟವಶಾತ್ ಈ ರಾಷ್ಟ್ರಗಳಲ್ಲಿ ರೇಬೀಸ್ ರೋಗವ ಪಿಡುಗು ಹೆಚ್ಚಾಗಿದೆ. ಇತ್ತೀಚೆಗೆ ಕೆಲವು ಸಾಂಕ್ರಾಮಿಕ ಕಾಯಿಲೆಗಳಾದ ಡಿಫ್ತೀರಿಯಾ, ನಾಯಿಕೆಮ್ಮು, ಪೋಲಿಯೋ, ದಡಾರ ಇವುಗಳು ನಿಯಂತ್ರಣಗೊಳ್ಳುತ್ತಿರುವುದರಿಂದ ಇನ್ನು ಮುಂದೆ ರೇಬೀಸ್ ರೋಗ ನಿಯಂತ್ರಣಕ್ಕೆ ಒಂದು ಬಿಗಿಯಾದ, ಸಂಘಟಿತ ರಾಷ್ಟ್ರೀಯ ನಿಯಂತ್ರಣ ಕಾರ್ಯಕ್ರಮದ ಅವಶ್ಯಕತೆ ಇದೆ.

ಸದ್ಯಕ್ಕೆ ರಾಷ್ಟ್ರದಲ್ಲಿ ರೇಬೀಸ್ ನಿಯಂತ್ರಣಕ್ಕೆ ಕೆಳಕಂಡ ಮಾರ್ಗಗಳನ್ನು ಅನುಸರಿಸಲಾಗುತ್ತಿದೆ.

೧. ಪ್ರಾಣಿಗಳಲ್ಲಿ ರೇಬೀಸ್ ನಿಯಂತ್ರಣ

೨. ಮನುಷ್ಯನಲ್ಲಿ ರೇಬೀಸ್ ನಿಯಂತ್ರಣ

## ೬.೧ ಪ್ರಾಣಿಗಳಲ್ಲಿ ರೇಬೀಸ್ ನಿಯಂತ್ರಣ

ಅ. ಅಲೆದಾಡುವ ಪ್ರಾಣಿಗಳ ನಿಯಂತ್ರಣ

ಅಂಡಲೆಯುವ ಪ್ರಾಣಿಗಳು ಅದರಲ್ಲೂ ನಾಯಿಗಳ ಹಾವಳಿ ಹೆಚ್ಚಿರುವ ಪ್ರದೇಶಗಳಲ್ಲಿ ಅವುಗಳಿಗೆ ಲಸಿಕೆನೀಡುವ ಸಾಧ್ಯತೆ ಇಲ್ಲದೆ, ಅವು ರೇಬೀಸ್ ರೋಗದ ಮೂಲಭಂಡಾರ (Reservoir/Source)ವಾಗಿ ಮನುಷ್ಯನಿಗೆ, ಅದರಲ್ಲೂ ಮಕ್ಕಳಿಗೆ ಕಚ್ಚಿ ರೇಬೀಸ್ ರೋಗ ಹರಡುವ ಸಾಧ್ಯತೆಗಳು ಹೆಚ್ಚು. ಇದನ್ನು ತಡೆಗಟ್ಟಲು ನಗರದ ಆರೋಗ್ಯ ಇಲಾಖೆ ಇವುಗಳನ್ನು ಹಿಡಿದು ಸಕ್ರಮವಾಗಿ ಹೆಚ್ಚು ನೋವಾಗದ ವಿಧಾನದಿಂದ ಕೊಲ್ಲಲು ವ್ಯವಸ್ಥೆ ಮಾಡಿದೆ. ಆದರೆ ಕೆಲವೆಡೆ ಇದಕ್ಕೆ ಪ್ರಾಣಿ ದಯಾಸಂಘದಿಂದ ಆಕ್ಷೇಪಗಳು ಬಂದು ಕೆಲವು ಸುಧಾರಣೆಗಳನ್ನು ಮಾಡಲಾಗಿದೆ.

ನಗರ ಪಾಲಿಕೆಯ ವಾಹನ ಹಾಗು ನಾಯಿ ಹಿಡಿಯುವ ಸಿಬ್ಬಂದಿಯವರು ತಮ್ಮ ಕಾರ್ಯಚರಣೆಯ ಪ್ರದೇಶಗಳಲ್ಲಿ ಹಾಗು ಸಾರ್ವಜನಿಕರಿಂದ ರಸ್ತೆ ನಾಯಿಗಳ ಹಾವಳಿಯ ಬಗ್ಗೆ ದೂರು ಬಂದಾಗ ಪ್ರತಿದಿನಮುಂಜಾನೆ ಆ ಸ್ಥಳಕ್ಕೆ ತೆರಳಿ ಅಲ್ಲಿ ತಮ್ಮದೆ ಆದ ವೈಶಿಷ್ಟ್ಯವಾದ ಕೋಲು ಹಾಗೂ ತಂತಿ ಸುರಳಿ ಅಥವಾ ಗೋಣಿಚೀಲದ ಪ್ರಯೋಗ ಮಾಡಿ ನಾಯಿಯನ್ನು ಹಿಡಿದು ತರುತ್ತಾರೆ. ಅವನ್ನು ನಾಯಿಯ ದೊಡ್ಡಿಯಲ್ಲಿ ಮೂರು ದಿನ ಮೂಳೆ ಅನ್ನ ನೀಡಿ ಕಾಯುತ್ತಾರೆ. ಈ ಸಮಯದಲ್ಲಿ ಯಾರಾದರೂ ನಾಯಿ ಸಾಕಿದವರು ಬಂದು ತಮ್ಮ ನಾಯಿಯನ್ನು ಗುರುತಿಸಿದರೆ ಆ ನಾಯಿಯನ್ನು ಅವರಿಗೆ ಹಿಂದಿರುಗಿಸುತ್ತಾರೆ. ಇಲ್ಲವಾದರೆ ಅನಂತರ ಅವನ್ನು ಸಾಮಾನ್ಯವಾಗಿ ವಿದ್ಯುತ್ ಸಂಪರ್ಕದಿಂದ ಕೊಂದು ಅವುಗಳ ಶವಗಳನ್ನು ಹೂಳುತ್ತಾರೆ. ಕೆಲವೆಡೆ ಇವನ್ನು ಮುಂದೆ ಗೊಬ್ಬರವಾಗಿ ಉಪಯೋಗಿಸಲಾಗುತ್ತಿದೆ.

ಇಲ್ಲಿ ಬೆಂಗಳೂರು ನಗರ ಮಹಾಪಾಲಿಕೆಯ ನಾಯಿ ದೊಡ್ಡಿಯ ಕೆಲವು ಅಂಕಿ ಅಂಶಗಳ ವಿವರ ಹೀಗಿದೆ.

| ವರ್ಷ | ಹಿಡಿದ ನಾಯಿಗಳು | ನಂತರ ಕೊಂದ ನಾಯಿಗಳು | ಸಾಕಿದವರಿಗೆ ಹಿಂದಿರುಗಿಸಿದ ಸಂಖ್ಯೆ |
|---|---|---|---|
| 1984 | 14650 | 13885 | 765 |
| 1985 | 23045 | 22236 | 809 |

| | | | |
|---|---|---|---|
| 1986 | 33659 | 32729 | 930 |
| 1987 | 26335 | 25548 | 787 |
| 1988 | 35544 | 34326 | 1218 |
| 1989 | 37829 | 36195 | 1634 |
| 1990 | 27699 | 26533 | 1166 |
| 1991 | 40744 | 38700 | 2044 |

ನಗರ ಪಾಲಿಕೆಯವರು ರಸ್ತೆ ನಾಯಿಗಳನ್ನು ಹಿಡಿಯಲು ಬಂದಾಗ ಕೆಲವೆಡೆ ವಿರೋಧವು ವ್ಯಕ್ತವಾಗಿದೆ. ಒಮ್ಮೊಮ್ಮೆ ಅವರು ನಾಯಿ ಹಿಡಿದರೂ ಕೆಲವರು ಅವರನ್ನು ಹೆದರಿಸಿ ಅಥವಾ ದುಡ್ಡಿನ ಆಮಿಷ ಒಡ್ಡಿ ಹಿಡಿದನಾಯಿಗಳನ್ನು ಬಿಡಿಸಿರುವುದು ಉಂಟು. ಇದರಿಂದಾಗಿ ಸಾರ್ವಜನಿಕರ ಸಹಕಾರ ಹಾಗು ಸಹಾಯವಿಲ್ಲದೆ ಈ ಬೀದಿನಾಯಿ ನಿಯಂತ್ರಣವು ಹೆಚ್ಚು ಪರಿಣಾಮ ನೀಡದ ಕಾರ್ಯಕ್ರಮವಾಗಿದೆ.

ಇತ್ತೀಚೆಗೆ 1993ರಲ್ಲಿ ದೆಹಲಿ ಉಚ್ಚ ನ್ಯಾಯಾಲಯವು ಮೇನಕಾ ಗಾಂಧಿಯವರ ಪ್ರಾಣಿ ದಯಾ ಸಂಘದ ವ್ಯಾಜ್ಯದಲ್ಲಿ ದೆಹಲಿ ಮಹಾನಗರ ಪಾಲಿಕೆಗೆ ರಸ್ತೆ ನಾಯಿಗಳ ನಿರ್ಮೂಲನೆಗೆ ತಡೆ ಆಜ್ಞೆ ನೀಡಿತು. ಆದುದರಿಂದ ಇನ್ನು ಮುಂದೆ ರಸ್ತೆ ನಾಯಿಗಳನ್ನು ಹಿಡಿದು ಅವುಗಳನ್ನು ಸಂತಾನಹರಣ ಶಸ್ತ್ರ ಚಿಕಿತ್ಸೆ ಮಾಡಿ ಹಾಗು ರೇಬೀಸ್ ಲಸಿಕೆ ಸಂರಕ್ಷಣೆ ನೀಡಿ ಪುನಃ ಅವು ಇದ್ದ ಪ್ರದೇಶದಲ್ಲಿ ಬಿಡುವ ಹೊಸ ಕಾರ್ಯಕ್ರಮವನ್ನು ಜಾರಿಗೊಳಿಸಲಾಗಿದೆ. ಈ ವಿಧಾನವನ್ನು ಇತರೇ ನಗರ ಪಾಲಿಕೆಗಳು ಜಾರಿಗೆ ತರುವ ಪ್ರಯತ್ನಗಳು ನಡೆದಿವೆ. ಆದರೆ ಇವುಗಳು ಎಷ್ಟು ಪ್ರಯೋಜನಕಾರಿ ಮತ್ತು ಪರಿಣಾಮಕಾರಿ ಎಂದು ತಿಳಿಯಲು ಕಾಲಾವಕಾಶ ಬೇಕಾಗುತ್ತದೆ.

## ಆ. ಸಾಕು ಪ್ರಾಣಿಗಳ ಮುಂಜಾಗ್ರತೆ ಲಸಿಕೆ ಹಾಗು ಸಾಕಣೆ

ಪ್ರಾಣಿ ಸಾಕಿರುವವರು ಸಾಮಾನ್ಯವಾಗಿ ಇದಕ್ಕೆ ನಗರ ಪಾಲಿಕೆಯಿಂದ ಅನುಮತಿ ಶುಲ್ಕ ನೀಡಿ ಒಂದು ಚಿಲ್ಲೆಯನ್ನು ಪಡೆದು, ಅದನ್ನು ನಾಯಿ

ಕತ್ತಿನಲ್ಲಿ ಪಟ್ಟಿಯಲ್ಲಿ ಕಟ್ಟಬೇಕು. ಇಂತಹ ನಾಯಿಗಳನ್ನು ನಗರಪಾಲಿಕೆಯವರು ನಿರ್ಮೂಲ ಮಾಡುವುದಿಲ್ಲ. ಹಾಗು ಪ್ರಾಣಿಗೆ ಮೊದಲು ಮುಂಜಾಗ್ರತೆಯ ಲಸಿಕೆಯನ್ನು ನೀಡಿರಬೇಕು. ಆದರೆ ಈ ಅನುಮತಿ ನೀಡಿಕೆಯನ್ನು ಯಶಸ್ವಿಯಾಗಿ ಕಾರ್ಯಗತಗೊಳಿಸಲು ಬಹಳಷ್ಟು ನಗರಪಾಲಿಕೆಗಳು ಸಂಪೂರ್ಣವಾಗಿ ವಿಫಲಗೊಂಡಿವೆ. ಸಾಕು ಪ್ರಾಣಿಯ ವಾರಸುದಾರರು ಪಶುವೈದ್ಯರಲ್ಲಿ ತಮ್ಮ ಪ್ರಾಣಿಯನ್ನು ಸಮಯಾನುಚಿತವಾಗಿ ಪರೀಕ್ಷೆಗೊಳಿಸಿ ಅದನ್ನು ರೇಬೀಸ್ ಬರದಂತೆ ನೋಡಿಕೊಳ್ಳುವುದು ಅವರ ಒಂದು ಸಾಮಾಜಿಕ ಜವಾಬ್ದಾರಿ.

i. ಸಾಕು ಪ್ರಾಣಿಗಳನ್ನು ರಸ್ತೆಯಲ್ಲಿ ಲಂಗುಲಗಾಮಿಲ್ಲದೆ ಓಡಾಡಲು ಬಿಡಬಾರದು. ಬೇರೆ ರಸ್ತೆ ಪ್ರಾಣಿಗಳೊಂದಿಗೆ ಬೆರೆಯಲು ಬಿಡಬಾರದು.

ii. ಒಂದು ನಿಶ್ಚಿತ ಅವಧಿಗೆ ಒಮ್ಮೆ ಅದಕ್ಕೆ ರೇಬೀಸ್ ನಿರೋಧಕ ಚುಚ್ಚು ಮದ್ದನ್ನು ಮುಂಜಾಗ್ರತೆಗಾಗಿ ಕೊಡಿಸಬೇಕು.

iii. ಕಾರಣಾಂತರವಾಗಿ ರಸ್ತೆನಾಯಿ/ಹುಚ್ಚು ನಾಯಿಯಿಂದ ಕಚ್ಚಲ್ಪಟ್ಟರೆ ತಕ್ಷಣ ಗಾಯವನ್ನು ಸೋಪು ಮತ್ತು ನೀರಿನಿಂದ ತೊಳೆದು ರೋಗನಾಶಕ ಔಷಧಿ ಲೇಪಿಸಿ. ಅನಂತರ ತಕ್ಷಣ ಪಶುವೈದ್ಯರ ಸಲಹೆ ಪಡೆಯಬೇಕು.

iv. ರಸ್ತೆ ನಾಯಿಗಳಿಗೆ ಆಹಾರ ನೀಡದಿರುವುದು, ಹಾಗೂ ಅವುಗಳ ಹಾವಳಿ ಹೆಚ್ಚಾದಲ್ಲಿ ನಗರ ಪಾಲಿಕೆ ಆರೋಗ್ಯ ಅಧಿಕಾರಿಗಳಿಗೆ ದೂರನ್ನು ನೀಡಿ ಅವುಗಳ ನಿರ್ಮೂಲನೆಗೆ ಸಮುದಾಯದೊಂದಿಗೆ ಸಹಕರಿಸಬೇಕು.

v. ಮಕ್ಕಳಿಗೆ ಪ್ರಾಣಿಗಳೊಂದಿಗೆ ಎಚ್ಚರಿಕೆಯಿಂದ ಇರಲು ಹಾಗೂ ದೂರವಿರಲು ಶಿಕ್ಷಣ ನೀಡುವುದು ಹಾಗು ಆಕಸ್ಮಾತ್ ಕಚ್ಚಿಸಿಕೊಂಡರೆ ತಕ್ಷಣ ದೊಡ್ಡವರಿಗೆ ತಿಳಿಸುವುದಕ್ಕೆ ಸೂಚಿಸಲು ಉತ್ತೇಜಿಸುವುದು ಅತಿ ಮುಖ್ಯ. ಕೆಲವೊಮ್ಮೆ ಮಕ್ಕಳು ನಾಯಿಯಿಂದ ಕಚ್ಚಿಸಿಕೊಂಡು ಭಯದಿಂದ ದೊಡ್ಡವರ ಗಮನಕ್ಕೆ ತರದೆ ನಂತರ ಅವರು ರೇಬೀಸ್ ರೋಗಕ್ಕೆ ತುತ್ತಾಗಿರುವ ಪ್ರಕರಣಗಳು ಉಂಟು. ದೊಡ್ಡ ಮಕ್ಕಳಿಗೆ ನಾಯಿ ಕಚ್ಚಿದ ನಂತರಮಾಡಬೇಕಾದ ಪ್ರಥಮ ಚಿಕಿತ್ಸೆ ಬಗ್ಗೆ ತಿಳುವಳಿಕೆ ನೀಡಬೇಕು.

vi. ಯಾವುದೇ ಪ್ರಾಣಿಯನ್ನು ದುರುಗುಟ್ಟಿಕೊಂಡು ನೋಡದಿರುವುದು ಹಾಗು ಕೆಣಕಲು ಹೋಗದಿರುವುದು ಒಳ್ಳೆಯದು.

vii. ನಾಯಿಗಳು ಉದ್ರೇಕಾವಸ್ಥೆಯಲ್ಲಿ (Heat) ಕಚ್ಚುವ ಸಾಧ್ಯತೆಯಿರುವುದರಿಂದ ವರ್ಷದಲ್ಲಿ ಮೇ/ಜೂನ್‌ಮತ್ತು ನವೆಂಬರ್/ ಡಿಸೆಂಬರ್ ತಿಂಗಳಲ್ಲಿ ಇವರ ಬಗ್ಗೆ ಹೆಚ್ಚು ಗಮನ ನೀಡುವುದು ಒಳ್ಳೆಯದು.

viii ನಾಯಿಗಳ ಮಿತಸಂತಾನದ ಬಗ್ಗೆ ಗಮನವನ್ನು ಇತ್ತೀಚೆಗೆ ಹರಿಸಲಾಗಿದೆ. ಇದಕ್ಕಾಗಿ ಶಸ್ತ್ರ ಚಿಕಿತ್ಸೆಯನ್ನು ಪಶು ವೈದ್ಯರು ಮಾಡಬಲ್ಲರು. ಈಗ ಗಂಡು ನಾಯಿ ಸಂತಾನಹರಣಕ್ಕೆ ಔಷಧ ಲಭ್ಯವಿದೆ. ಇದರ ಬಗ್ಗೆ ಹೆಚ್ಚಿನ ಮಾಹಿತಿಗಾಗಿ ಪಶುವೈದ್ಯರನ್ನು ಸಂಪರ್ಕಿಸುವುದು ಒಳ್ಳೆಯದು.

ಕೆಲವೆಡೆ ನಗರ ಪಾಲಿಕೆಯವರು ಅಂಡಲೆಯುವ ನಾಯಿಗಳನ್ನು ಹಿಡಿದು ಅವುಗಳ ಸಂತಾನಹರಣ ಶಸ್ತ್ರ ಚಿಕಿತ್ಸೆ(ಗಂಡು ನಾಯಿಗೆ) ಮಾಡಿ ನಾಯಿ ನಿಯಂತ್ರಣದ ಪ್ರಯತ್ನ ಮಾಡುತ್ತಿದ್ದಾರೆ.

**೬.೨ ಸಮುದಾಯದಲ್ಲಿ ರೇಬೀಸ್ ನಿವಾರಣ ಅರಿವು ಮತ್ತು ಕಾರ್ಯಾಚರಣೆ**

ಯಾವುದೇ ಒಂದು ಕಾಯಿಲೆ ನಿಯಂತ್ರಣಕ್ಕೆ ಸಮುದಾಯದ ಅರಿವು, ಸಹಕಾರ ಹಾಗೂ ಸ್ವಇಚ್ಛೆಯ ಪಾಲ್ಗೊಳ್ಳುವಿಕೆ ಮುಖ್ಯ. ಅದರಲ್ಲೂ ಈ ಕೆಳಕಂಡ ಕೆಲವು ಕ್ಷೇತ್ರಗಳಲ್ಲಿ ಅದರ ಅವಶ್ಯಕತೆ ಹೆಚ್ಚು.

ಅ. ಅಂಡಲೆಯುವ ಪ್ರಾಣಿಗಳ ನಿಯಂತ್ರಣ

ಆ. ಸಾಕುಪ್ರಾಣಿಗಳಿಗೆ ಸಮಯಾನುಸಾರ ಹಾಗೂ ಕ್ರಮಬದ್ಧವಾಗಿ ಮುಂಜಾಗ್ರತೆ ಲಸಿಕೆ ನೀಡುವಿಕೆ.

ಇ. ಶಾಲೆಗಳಲ್ಲಿ, ಮಕ್ಕಳಿಗೆ ರೇಬೀಸ್ ಬಗ್ಗೆ ಅರಿವು ಮೂಡಿಸುವುದು, ಅಂಡಲೆಯುವ ಪ್ರಾಣಿಗಳಿಂದ ದೂರವಿರಿಸುವುದು, ಪ್ರಾಣಿ ಕಚ್ಚಿದರೆ ತಕ್ಷಣ ಪ್ರಥಮ ಚಿಕಿತ್ಸೆ ಮಾಡಿ ರೇಬೀಸ್ ನಿರೋಧಕ ಲಸಿಕೆಪಡೆಯುವುದು.

ಈ. ಸಮುದಾಯ ಆರೋಗ್ಯ ಕಾರ್ಯಕರ್ತರು ತಮ್ಮ ದೈನಂದಿನ

ಕೆಲಸದಲ್ಲಿ ಸಂದರ್ಭಾನುಚಿತವಾಗಿ ರೇಬೀಸ್‌ಬಗ್ಗೆ ಜನರಲ್ಲಿ ಅರಿವು ಮೂಡಿಸಬೇಕು.

ಉ. ಸರ್ಕಾರ, ಸರ್ಕಾರೇತರ, ಹಾಗು ಖಾಸಗಿ ಸಂಸ್ಥೆಗಳು ರೇಬೀಸ್ ಬಗ್ಗೆ ಪುಸ್ತಕ, ಭಿತ್ತಿಪತ್ರಗಳು, ಕರಪತ್ರಗಳನ್ನು ಹೊರಡಿಸಿ ಸಮುದಾಯದಲ್ಲಿ ಅವನ್ನು ಸರಿಯಾಗಿ ಹಂಚಬೇಕು. ಹಾಗು ಅರಿವು ಮೂಡಿಸುವಿಕೆ ಬಗ್ಗೆ ಖಚಿತ ಕಾರ್ಯಾಚರಣೆ ಮಾಡಬೇಕು.

ಊ. ದೂರದರ್ಶನ, ರೇಡಿಯೋ ಕಾರ್ಯಕ್ರಮಗಳ ಮೂಲಕ ಜನರಲ್ಲಿ ಅರಿವು ಮೂಡಿಸಬೇಕು.

# ೭. ಸಂದೇಹ ನಿವಾರಣೆ

## ೭.೧ ಮನುಷ್ಯನಲ್ಲಿ ರೇಬೀಸ್

**ಅ. ರೇಬೀಸ್ ಏಕೆ ಶೇಕಡ 100ರಷ್ಟು ಮರಣಾಂತಕ ಕಾಯಿಲೆ?**

ಏಕೆಂದರೆ ಒಮ್ಮೆ ರೇಬೀಸ್ ವಿಷಾಣು ನರಮಂಡಲ ಪ್ರವೇಶಿಸಿ ನಂತರ ಅದು ನಿರ್ವಿಘ್ನವಾಗಿ ಬೆನ್ನುಹುರಿ ಹಾಗೂ ಮಿದುಳನ್ನು ಪ್ರವೇಶಿಸಿ ನರಕೋಶಗಳನ್ನು ಸಂಪೂರ್ಣವಾಗಿ ಧ್ವಂಸಮಾಡುತ್ತದೆ. ಇದನ್ನು ತಡೆಗಟ್ಟಲುಇದುವರೆವಿಗೂ ವಿಶ್ವದಲ್ಲೆಲ್ಲೂ ಔಷಧಿಯನ್ನು ಕಂಡು ಹಿಡಿದಿಲ್ಲ. ಆದುದರಿಂದ ರೋಗಿಗೆ ಒಮ್ಮೆ ರೇಬೀಸ್ (ಜಲಭಯ)ಬಂದರೆ, ಸಾಯುವುದು ಖಚಿತ. ಇಲ್ಲಿ ತಿಳಿಯಬೇಕಾದುದೇನಂದರೆ ನಾಯಿ ಕಚ್ಚಿದ ನಂತರ ನಾಯಿಯ ಜೊಲ್ಲಿನಲ್ಲಿ ರೇಬೀಸ್ ವಿಷಾಣು ಇದ್ದರೆ ಅದು ನರಮಂಡಲ ತಲುಪದಿರುವಂತೆ ತಡೆಯುವುದು ಅತಿ ಮುಖ್ಯ. ಆದುದರಿಂದ ತಕ್ಷಣ ಸೂಕ್ತ ರೋಗನಿರೋಧಕ ಚಿಕಿತ್ಸೆ ಮಾಡುವುದು ಅತಿ ಅವಶ್ಯಕ, ಹಾಗೂ ಇದು ಒಂದು ಪ್ರಾಣ ಉಳಿಸುವ ಕ್ರಮವಾಗಿರುತ್ತದೆ.

**ಆ. ಮನುಷ್ಯನಿಗೆ ಯಾವ ಜಾಗದಲ್ಲಿ ಹುಚ್ಚುನಾಯಿ ಕಚ್ಚಿದರೆ ಹೆಚ್ಚು ರೇಬೀಸ್ ಗಂಡಾಂತರ ಇರುತ್ತದೆ?**

ಎಲ್ಲಿ ನರವ್ಯೂಹ ಹೆಚ್ಚಾಗಿರುವುದೊ, ಉದಾಹರಣೆಗೆ ಪುಷ್ಠ, ಕೈಗಳು, ಬೆರಳುಗಳು, ಕಚ್ಚಿದ ಗಾಯ ಮಿದುಳಿನ ಹತ್ತಿರವಿದ್ದಷ್ಟು ಹೆಚ್ಚು ಗಂಡಾಂತರ. ಉದಾ:- ಮುಖ, ಕಿವಿ, ಕತ್ತು, ತಲೆ ಹಾಗೂ ಕಣ್ಣು.

**ಇ. ರೇಬೀಸ್ ವಿಷಾಣು ಯಾವುದರಿಂದ ನಿಷ್ಕ್ರಿಯಗೊಳ್ಳುತ್ತದೆ?**

ಸಾಬೂನು, ರೋಗನಾಶಕ ಔಷಧಿಗಳು, ಆಲ್ಕೊಹಾಲ್ (ಸ್ಪಿರಿಟ್), ಬಿಸಿಲಿನಲ್ಲಿ ಒಣಗಿಸುವುದರಿಂದ, ಆಮ್ಲ(ಆಸಿಡ್) ಮತ್ತು ಕ್ಷಾರಗಳಿಂದ (ಅಲ್‌ಕಲಿ) ವಿಷಾಣು ನಿಷ್ಕ್ರಿಯಗೊಳ್ಳುತ್ತದೆ. ಆದುದರಿಂದ ನಾಯಿ ಕಚ್ಚಿದ ಗಾಯಕ್ಕೆ ಸೋಪಿನಿಂದ ತೊಳೆಯುವುದು, ರೋಗನಾಶಕ ಔಷಧಿಗಳನ್ನು ಹಚ್ಚುವುದು ಅತಿ ಮುಖ್ಯ.

**ಈ. ಮಕ್ಕಳಲ್ಲಿ ರೇಬೀಸ್ ಕಾಯಿಲೆ ಹೆಚ್ಚಾಗಿ ಕಂಡುಬರುತ್ತದೆಯೆ?**

ಹೌದು. ಮಕ್ಕಳು ಸ್ವಾಭಾವಿಕವಾಗಿ ಕಡಿಮೆ ಎತ್ತರವಿದ್ದು, ಹಾಗು ಪ್ರಾಣಿಗಳೊಂದಿಗೆ ಆಡುವುದು, ಕೆಣಕುವುದು ಮಾಡುತ್ತಾರೆ. ಹಾಗಾಗಿ ಒಮ್ಮೊಮ್ಮೆ ಅವರಿಗೆ ಕಡಿತವು ತೀವ್ರವಾಗಿ ಆಗಬಹುದು. ಅದರಲ್ಲೂ ಸಣ್ಣಗಾಯವಾದರೆ, ಸೋಪಿನಿಂದ ತೊಳೆಯಲು ಗೊತ್ತಿಲ್ಲದಿರುವುದರಿಂದ ಗಾಯವನ್ನು ತೊಳೆಯುವುದಿಲ್ಲ. ಒಮ್ಮೊಮ್ಮೆ ಭಯದಿಂದ ಮನೆಯಲ್ಲಿ ದೊಡ್ಡವರಿಗೆ ನಾಯಿ ಕಚ್ಚಿದ್ದು ತಿಳಿಸುವುದೇ ಇಲ್ಲ. ಹೀಗಾಗಿ ಮಕ್ಕಳಲ್ಲಿ ರೇಬೀಸ್‌ಬರುವ ಸಾಧ್ಯತೆ ಹೆಚ್ಚು.

**ಉ. ರೇಬೀಸ್ ರೋಗಿಯು ಸತ್ತ ನಂತರ ರೋಗಿಯ ವಸ್ತುಗಳನ್ನು ಹೇಗೆ ನಿಷ್ಕ್ರಿಯೆಗೊಳಿಸಬೇಕು ?**

ರೋಗಿಯ ಬಟ್ಟೆಗಳನ್ನು ಸೋಪು ಹಾಗು ಬಿಸಿನೀರಿನಿಂದ ಒಗೆದು ಬಿಸಿಲಿನಲ್ಲಿ ಒಣಗಿಸಬೇಕು. ಆದರೆ ಶವದೊಂದಿಗೆ ದಹನ ಮಾಡುವುದು ಉಚಿತ. ಹಾಗೂ ರೋಗಿ ಇದ್ದ ಕೋಣೆಯನ್ನು ಸೋಪು ನೀರಿನಿಂದ ತೊಳೆದು (ಸಾಧ್ಯವಿದ್ದರೆ ಫೀನಾಯಲ್‌ನಿಂದ ಕೂಡ) ಕಿಟಕಿ ಬಾಗಿಲು ತೆಗೆದು ಒಣಗಿಸಬೇಕು.

**ಊ. ಸಂಭೋಗದ ಮೂಲಕ ರೇಬೀಸ್ ರೋಗ ಹರಡಲು ಸಾಧ್ಯವೇ?**

ವೀರ್ಯದಲ್ಲಿ/ಯೋನಿ ಸ್ರಾವದಲ್ಲಿ ರೇಬೀಸ್ ವೈರಸ್ ಇರುವ ಸಾಧ್ಯತೆ ಉಂಟು. ತಾತ್ವಿಕವಾಗಿ ಹೇಳುವುದಾದರೆ ರೋಗ ಹರಡುವ ಸಾಧ್ಯತೆ ಉಂಟು. ಆದುದರಿಂದ ಇಂತಹ ರೇಬೀಸ್ ರೋಗಿಯೊಂದಿಗೆ ಸಂಭೋಗದ ಸಂಪರ್ಕ ಹೊಂದಿದ ವ್ಯಕ್ತಿಗಳಿಗೆ ರೇಬೀಸ್ ರೋಗ ನಿರೋಧಕ ಲಸಿಕೆ ನೀಡುವ ಅಗತ್ಯವಿದೆ.

**ಋ. ರೇಬೀಸ್ ರೋಗಕ್ಕೆ ತುತ್ತಾಗಿರುವ ಗರ್ಭಿಣಿ ಸ್ತ್ರೀಯಿಂದ ಗರ್ಭದಲ್ಲಿನ ಶಿಶುವಿಗೆ ರೇಬೀಸ್ ವರ್ಗಾವಣೆಸಾಧ್ಯವೇ?**

ಸಾಮಾನ್ಯವಾಗಿ ರೇಬೀಸ್ ರೋಗ ಬಂದಿರುವ ಗರ್ಭಿಣಿಯ ಮಾಸು ಚೀಲ ಶಿಶುವಿಗೆ ರೇಬೀಸ್ ವೈರಸ್ ತಾಯಿಯಿಂದ ಹರಡದಂತೆ ರಕ್ಷಣೆ

ನೀಡುತ್ತದೆ. ಆದರೆ ಪ್ರಸವದ ಸಮಯದಲ್ಲಿ ತಾಯಿಯ ಗರ್ಭಸ್ರಾವದಲ್ಲಿ ರೇಬೀಸ್ ವೈರಸ್ ಇರುತ್ತದೆ. ಹಾಗು ಇದು ಶಿಶುವಿಗೆ ತಗಲುವುದರಿಂದ ನವಜಾತ ಶಿಶುವಿಗೆ ಮುಂಜಾಗ್ರತೆ ಲಸಿಕೆ ನೀಡಿ ರೇಬೀಸ್ ರೋಗವನ್ನು ತಡೆಯಬಹುದು.

## ೭.೨ ಲಸಿಕಾ ಚಿಕಿತ್ಸೆ ಇತ್ಯಾದಿ

**ಅ. ರೇಬೀಸ್ ರೋಗದ ವಿರುದ್ಧ ಒಂದು–ಎರಡು ಗುಟುಕು ಇರುವ ಲಸಿಕೆ ಲಭ್ಯ ಉಂಟೆ?**

ವಿಶ್ವದಲ್ಲಿ ಎಲ್ಲೂ ರೇಬೀಸ್ ವಿರುದ್ಧ ಒಂದು ಅಥವಾ ಎರಡು ಗುಟುಕು ಇರುವ ಪ್ರಯೋಗಕಾರಿ ಲಸಿಕೆ ಲಭ್ಯವಿಲ್ಲ.

**ಆ. ಕೃಷಿ ಲಸಿಕೆಗಳು, ನರಸತ್ವ ಲಸಿಕೆಗಳಿಗಿಂತ ಹೇಗೆ ಉತ್ತಮ ?**

| ಕೃಷಿ ಲಸಿಕೆ | ನರಸತ್ವ ಲಸಿಕೆ |
|---|---|
| ಅ)ಲಸಿಕೆ ಗುಟುಕು ಪ್ರಮಾಣ ಕಡಿಮೆ ಉದಾ:– ಹೆಚ್.ಡಿ.ಸಿ.ವಿ ಹಾಗು ರಬೀಪುರ್ – 1 ಮಿಲೀ. ವಿರೋರಾಬ್ – 0.5 ಮಿಲೀ. | ಅ)ಲಸಿಕೆ ಗುಟುಕು 1 ಮಿಲಿ–10 ಮಿಲಿ |
| (ಆ)ಹೆಚ್ಚು ಸುರಕ್ಷಿತ, ಹಾಗು ಇವುಗಳಿಂದ ನರಮಂಡಲದ ಮೇಲೆ ದುಷ್ಪರಿಣಾಮ ಹಾಗು ಅನಾಹುತ ತೊಂದರೆಗಳು ವರದಿಯಾಗಿಲ್ಲ. | (ಆ) 1:4,000-1:10,000 ರೋಗಿಗಳಲ್ಲಿ ನರಮಂಡಲದ ಮೇಲೆ ದುಷ್ಪರಿಣಾಮ ಬೀರಿ ತೊಂದರೆ ಉಂಟಾಗುತ್ತದೆ. ಲಕ್ವ ಕೂಡ ಹೊಡೆಯಬಹುದು |
| (ಇ)ಹೆಚ್ಚು ಕಾಲ ರೋಗನಿರೋಧಕ ರಕ್ಷಣೆ ನೀಡುತ್ತದೆ ಕನಿಷ್ಠ ಒಂದು ವರ್ಷದಿಂದ ಎರಡು ವರ್ಷದವರೆಗೆ. | (ಇ)ಆರು ತಿಂಗಳ ರಕ್ಷಣೆ ನೀಡುತ್ತದೆ. |
| (ಈ) ಮುಂಜಾಗ್ರತೆ ರಕ್ಷಣೆಗೆ ಉಪಯೋಗಿಸಬಹುದು. | (ಈ) ಸಾಧ್ಯವಿಲ್ಲ. |
| (ಉ) ಹೆಚ್ಚು ಕಾಲ ಸತ್ವವನ್ನು ಹೊಂದಿರುತ್ತದೆ. ಉದಾ: 2-3 ವರ್ಷ | (ಉ) ಆರು ತಿಂಗಳು ಸಾಮಾನ್ಯವಾಗಿ ಸತ್ವ ಇರುತ್ತದೆ. |

| | |
|---|---|
| (ಊ) ಅತಿ ಹೆಚ್ಚು ರಕ್ಷಣಾತ್ಮಕ ಶೇಕಡಾ 100 ರಷ್ಟು | (ಊ) ಕಡಿಮೆ ರಕ್ಷಣಾತ್ಮಕ ಶೇಕಡಾ 90ರಷ್ಟು |
| (ಋ) ವಿಶ್ವ ಆರೋಗ್ಯ ಸಂಸ್ಥೆಯ ಮಾನ್ಯತೆ ಪಡೆದಿದೆ | (ಋ) ವಿಶ್ವ ಆರೋಗ್ಯ ಸಂಸ್ಥೆಯು ಇವುಗಳನ್ನು ನಿಷೇಧಿಸಲು ಸಲಹೆ ಮಾಡಿದೆ. |

**ಇ. ಲಸಿಕೆ ಚಿಕಿತ್ಸೆ ಸಮಯದಲ್ಲಿ ಆಹಾರದಲ್ಲಿ ಪಥ್ಯವೇನಾದರೂ ಇದೆಯೇ?**

ಹೆಚ್ಚಾಗಿ ತಂಬಾಕು ಸೇವನೆ, ಬೀಡಿ, ಸಿಗರೇಟು ಸೇದಬಾರದು, ಮದ್ಯಪಾನ ಮಾಡಕೂಡದು. ಆದರೆ ವಿಶೇಷವಾಗಿ ಆಹಾರದಲ್ಲಿ ಏನೂ ಪಥ್ಯವಿರುವುದಿಲ್ಲ.

**ಈ. ಕೃಷಿ ಲಸಿಕೆ ವೇಳಾಪಟ್ಟಿಯಲ್ಲಿ ದಿನ '0' (ಶೂನ್ಯ) ಅಂದರೇನು?**

ದಿನ ಶೂನ್ಯವೆಂದರೆ ಮೊದಲನೆ ಲಸಿಕೆ ಗುಟುಕು ಪಡೆಯುವ ದಿನ, ಹಾಗು ಇದು ನಾಯಿ ಕಚ್ಚಿದ ದಿನವಲ್ಲ. ಏಕೆಂದರೆ ನಾಯಿ ಕಚ್ಚಿದ ನಂತರ ರೋಗಿಯು ಕೆಲವೊಮ್ಮೆ ತಡವಾಗಿ ಬಂದು ಲಸಿಕೆ ಚಿಕಿತ್ಸೆ ಪ್ರಾರಂಭಿಸುತ್ತಾನೆ.

ಉದಾ : ಒಬ್ಬನಿಗೆ ಜನವರಿ 7 ರಂದು ನಾಯಿ ಕಚ್ಚುತ್ತದೆ. ಆದರೆ ಆತನು ಮಾರನೆ ದಿನ ವೈದ್ಯರಿಂದ ಮೊದಲನೆಯ ಕೃಷಿ ಲಸಿಕೆ ಪಡೆಯುತ್ತಾನೆ. ಅಂದರೆ ದಿನ 0 (ಶೂನ್ಯ) ಜನವರಿ 8 ಆಗುತ್ತದೆ. ಮುಂದೆ ಆತನು ವೇಳಾ ಪಟ್ಟಿಯಂತೆ

ದಿನ 3 – ಜನವರಿ 11
ದಿನ 7 – ಜನವರಿ 15
ದಿನ 14 – ಜನವರಿ 22
ದಿನ 30 – ಫೆಬ್ರವರಿ 7 ರಂದು ಲಸಿಕೆಯನ್ನು ಪಡೆಯುತ್ತಾನೆ. ಅದೇ ಮುಂಜಾಗ್ರತೆ ಲಸಿಕೆ ಸಂರಕ್ಷಣೆ ವೇಳಾಪಟ್ಟಿಯಾದರೆ,

ಉದಾ : ದಿನ 0 – ಜನವರಿ 8
ದಿನ 7 – ಜನವರಿ 15
ದಿನ 28 – ಫೆಬ್ರವರಿ 5 ಆಗುತ್ತದೆ.

ಒಂದು ವರ್ಷದ ನಂತರ ಫೆಬ್ರವರಿ 5 ರಂದು ಮೊದಲನೆಯ ವೃದ್ಧಿಕರ ಲಸಿಕೆ (ಬೂಸ್ಟರ್ ಡೋಸ್) ನಂತರ ಪ್ರತಿ ಮೂರು ವರ್ಷಕ್ಕೊಮ್ಮೆ ಮರು ವೃದ್ಧಿಕರ ಲಸಿಕೆ ನೀಡಲಾಗುತ್ತದೆ.

**ಉ. ಮಕ್ಕಳಲ್ಲಿ ಜ್ವರ, ಭೇದಿ, ಶೀತಾಳ ಸಿಡುಬು, ದಡಾರ ಇತರೆ ಕಾಯಿಲೆ ಇದ್ದಾಗ ನಾಯಿ ಕಚ್ಚಿದರೆ ಏನುಮಾಡಬೇಕು?**

ರೇಬೀಸ್ ಶೇಕಡಾ 100ರಷ್ಟು ಮರಣಾಂತಕ ರೋಗ. ಆದುದರಿಂದ ಈ ಎಲ್ಲ ಕಾಯಿಲೆಗಳು ರೇಬೀಸ್ ಲಸಿಕೆ ಕೊಡದಿರಲು ಕಾರಣವಾಗುವುದಿಲ್ಲ. ಇಂತಹ ಮಕ್ಕಳಲ್ಲಿ ಸೌಲಭ್ಯವಿದ್ದಲ್ಲಿ ಅವರಿಗೆ ರೇಬೀಸ್ ಲಸಿಕೆ ನೀಡಿ ಅವರ ರಕ್ತದಲ್ಲಿ ರಕ್ಷಣಾ ವಸ್ತು(ಆ್ಯಂಟಿ ಬಾಡಿ)ವಿನ ಪರೀಕ್ಷೆಗೆ ವ್ಯವಸ್ಥೆ ಮಾಡುವುದು ಸೂಕ್ತ.

**ಊ. ನಾಯಿ ಕಚ್ಚಿದ ಗಾಯಕ್ಕೆ ಹಲಸಿನ ಹಾಲು, ಕಳ್ಳಿ ಹಾಲು, ತಾಮ್ರದ ಕಾಸು, ಸೊಪ್ಪಿನ ರಸ, ಮೆಣಸಿನಕಾಯಿಪುಡಿ ಇತ್ಯಾದಿ ಹಚ್ಚುವುದರಿಂದ ರಕ್ಷಣೆ ಹಾಗು ಲಾಭವುಂಟೆ?**

ಖಂಡಿತ ಇಲ್ಲ. ಇದರಿಂದ ಇನ್ನೂ ಹಾನಿ ಆಗುವ ಸಂಭವ ಉಂಟು. ನಾಯಿ ಕಚ್ಚಿದ ಜಾಗದಲ್ಲಿ ಜೊಲ್ಲು ಇದ್ದು, ಅದರಲ್ಲಿ ರೇಬೀಸ್ ವಿಷಾಣು ಇದ್ದರೆ ಈ ಮೇಲೆ ಸೂಚಿಸಿದ ವಸ್ತುಗಳನ್ನು ಆ ಗಾಯಕ್ಕೆ ಹಚ್ಚಿದರೆ, ಅವುಗಳು ರೇಬೀಸ್ ವಿಷಾಣವನ್ನು ಚುರುಕುಗೊಳಿಸುತ್ತವೆ. ಆದುದರಿಂದ ಇವು ನರಮಂಡಲಕ್ಕೆ ಹರಡಲು ಸಹಾಯಮಾಡುತ್ತವೆ. ಆದುದರಿಂದ ಇವು ಯಾವುದನ್ನು ಮಾಡಬಾರದು. ಗಾಯವನ್ನು ನೀರು ಹಾಗು ಸೋಪಿನಿಂದ ಚೆನ್ನಾಗಿ ತೊಳೆಯಬೇಕು. ಹಾಗು ರೋಗ ನಾಶಕ ಔಷಧಿಯನ್ನು ಹಚ್ಚಿ ತಕ್ಷಣ ಆರೋಗ್ಯ ಕೇಂದ್ರ/ಆಸ್ಪತ್ರೆಯಲ್ಲಿನ ವೈದ್ಯರನ್ನು ಭೇಟಿಮಾಡಿ, ಲಸಿಕಾ ಸಂರಕ್ಷಣೆ ಮಾಡಿಸುವುದು ಒಳ್ಳೆಯದು.

**ಋ. ನಾಯಿ ಕಚ್ಚಿದ ಎಷ್ಟು ಸಮಯದ ನಂತರ ಲಸಿಕೆ ಪಡೆಯುವುದು ಸೂಕ್ತ?**

ಎಷ್ಟು ಬೇಗ ಸಾಧ್ಯವೊ ಅಷ್ಟು ಬೇಗ, ಸ್ವಲ್ಪವೂ ಸಮಯ ವ್ಯರ್ಥ ಮಾಡದೆ ಲಸಿಕೆ ಹಾಕಿಸಬೇಕು. ಆದರೆ ಸಾಮಾನ್ಯವಾಗಿ ನಾಯಿ ಕಚ್ಚಿ 10 ದಿನಗಳ ನಂತರವಾದರೆ ನಾಯಿ ಬದುಕಿದ್ದರೆ, ಲಸಿಕೆ ಪಡೆಯುವ

ಅವಶ್ಯಕತೆಯಿಲ್ಲ ಆದರೆ ಕಚ್ಚಿದ ನಾಯಿ ಬಗ್ಗೆ ವಿವರ ಗೊತ್ತಿಲ್ಲದಿದ್ದರೆ ಸಾಮಾನ್ಯವಾಗಿ ಕಚ್ಚಿದ 2 ವರ್ಷದವರೆಗೂ ಲಸಿಕೆ ಕೊಡುವ ಅಗತ್ಯ ಉಂಟು.

**ಎ. ಲಸಿಕೆಗಳನ್ನು ದೇಹದಲ್ಲಿ ಎಲ್ಲಿ ತೆಗೆದುಕೊಳ್ಳಬೇಕು?**

ನರಸತ್ವ ಲಸಿಕೆಯನ್ನು ಹೊಕ್ಕಳಿನ ಸುತ್ತ ಹೊಟ್ಟೆಯ ಚರ್ಮದ ಕೆಳಗೆ ಗುರುತಿಸಿದ ಜಾಗದಲ್ಲಿ ಕ್ರಮವಾಗಿ(ವಿವರನ್ನು ಹಿಂದೆ ನೀಡಲಾಗಿದೆ) ಕೊಡಬೇಕು. ಗರ್ಭಿಣಿ ಸ್ತ್ರೀಯರಲ್ಲಿ ಬೆನ್ನಿನಲ್ಲಿ ಅಥವಾ ತೊಡೆಯಲ್ಲಿ ಚರ್ಮದ ಕೆಳಗೆ ಕೊಡಬೇಕು.

ಕೃಷಿ ಲಸಿಕೆಗಳನ್ನು ಕಡ್ಡಾಯವಾಗಿ ತೋಳಿನ ಸ್ನಾಯುವಿನಲ್ಲಿ (ಇನ್‌ಟ್ರಾಮಸ್ಕುಲರ್) ಹಾಗು ಸಣ್ಣ ಮಕ್ಕಳಲ್ಲಿ ತೊಡೆಯ ಹೊರಭಾಗದಲ್ಲಿ ಸ್ನಾಯುವಿನಲ್ಲಿ ಕೊಡಬೇಕು. ಈ ಲಸಿಕೆಯನ್ನು ತಪ್ಪಾಗಿ ಪೃಷ್ಠದಲ್ಲಿ ಕೊಟ್ಟರೆ ಅಲ್ಲಿನ ಕೊಬ್ಬು ಈ ಲಸಿಕೆ ಹೀರುವಿಕೆಗೆ ಅಡ್ಡಮಾಡಿ ಲಸಿಕೆ ಪರಿಣಾಮಕಾರಿಯಾಗುವುದಿಲ್ಲ, ಹಾಗು ವ್ಯರ್ಥವಾಗುತ್ತದೆ.

**ಎ. ಒಮ್ಮೆ ಲಸಿಕೆ ಚಿಕಿತ್ಸೆ ಪಡೆದ ನಂತರ ಪುನಃ ಪ್ರಾಣಿ ಕಚ್ಚಿದರೆ ಲಸಿಕೆ ಚಿಕಿತ್ಸೆ ಪಡೆಯಬೇಕೆ?**

ಒಮ್ಮೆ ಲಸಿಕೆ ಚಿಕಿತ್ಸೆ ಪಡೆದ ನಂತರ ಅದರ ಪರಿಣಾಮವು ಕೆಲಕಾಲ ಮಾತ್ರ ಇರುತ್ತದೆ. ನರಸತ್ವ ಲಸಿಕೆಯಾದರೆ ಸಾಮಾನ್ಯವಾಗಿ ಆರು ತಿಂಗಳು ಕಾಲ ಇರುತ್ತದೆ. ಈ ಅವಧಿಯಲ್ಲಿ ಮತ್ತೊಮ್ಮೆ ನಾಯಿ ಕಚ್ಚಿದರೆ ಪೂರ್ಣ ಲಸಿಕೆ ಚಿಕಿತ್ಸೆ ಬೇಕಿಲ್ಲ. ಕಡಿಮೆ ಲಸಿಕೆ ಚಿಕಿತ್ಸೆ ಬೇಕಾಗುತ್ತದೆ. ಇದರ ವಿವರವನ್ನು ಲಸಿಕೆ ತಯಾರಕರು ಲಸಿಕೆಯೊಂದಿಗೆ ವೈದ್ಯರಿಗೆ ನೀಡಿರುತ್ತಾರೆ. ಅದನ್ನು ವೈದ್ಯರು ಕ್ರಮವಾಗಿ ಪಾಲಿಸುತ್ತಾರೆ. ಆದರೆ ಮೊದಲನೆ ಲಸಿಕೆ ಸಂರಕ್ಷಣಾ ಚಿಕಿತ್ಸೆ ಪಡೆದು ಆರು ತಿಂಗಳು ಮುಗಿದಿದ್ದರೆ ಸಂಪೂರ್ಣ ಲಸಿಕೆ ಚಿಕಿತ್ಸೆಯನ್ನು ಪುನಃ ಹೊಸದಾಗಿ ಶುರು ಮಾಡಬೇಕಾಗುತ್ತದೆ.

ಕೃಷಿ ಲಸಿಕೆಗಳನ್ನು ಮೊದಲು ಪಡೆದಿದ್ದರೆ ಅವುಗಳ ಪರಿಣಾಮವು 1-3 ವರ್ಷದವರೆಗೆ ಇರುತ್ತದೆ. ಈ ಸಮಯದಲ್ಲಿ ಪುನಃ ಪ್ರಾಣಿಯಿಂದ

ಕಚ್ಚಲ್ಪಟ್ಟರೆ ಕಡಿಮೆ ಲಸಿಕೆ ಚಿಕಿತ್ಸೆ ಬೇಕಾಗುತ್ತವೆ. ಇದರ ವಿವರವು ಆ ಲಸಿಕೆ ತಯಾರಕರು ಲಸಿಕೆಯೊಂದಿಗೆ ವೈದ್ಯರಿಗೆ ನೀಡಿರುತ್ತಾರೆ. ಅದನ್ನು ವೈದ್ಯರು ಕ್ರಮವಾಗಿ ಪಾಲಿಸುತ್ತಾರೆ. ಆದರೆ ಮೊದಲ ಬಾರಿಗೆ ಕಚ್ಚಿದಾಗ 5 ಕೃಷಿ ಲಸಿಕೆಯನ್ನು ಪಡೆದು ಮೂರು ವರ್ಷಗಳಾಗಿದ್ದರೆ, ಸಂಪೂರ್ಣ ಐದು ಲಸಿಕೆಯನ್ನು ಚಿಕಿತ್ಸೆ ಪುನಃ ಹೊಸದಾಗಿ ಶುರುಮಾಡುವುದು ಒಳ್ಳೆಯದು.

ಆದರೆ ಎಲ್ಲಿ ರಕ್ತ ಪರೀಕ್ಷೆ ಮಾಡಿ ರಕ್ಷಣಾ ವಸ್ತುವಿನ ವಿವರವನ್ನು ನೀಡುವ ಪ್ರಯೋಗ ಶಾಲೆಯ ಸೌಕರ್ಯವಿದೆಯೋ ಅಲ್ಲಿ ಇನ್ನು ಸ್ವಲ್ಪ ಕಡಿಮೆ ಲಸಿಕೆಯನ್ನು ನೀಡುವ ನಿರ್ಧಾರ ತೆಗೆದುಕೊಳ್ಳುವ ಸಾಧ್ಯತೆ ಉಂಟು.

**ಐ. ರೇಬೀಸ್ ಲಸಿಕೆಗಳನ್ನು ಶೀತಕ (ರೆಫ್ರಿಜಿರೇಟರ್)ದಲ್ಲೇ ಇಡಬೇಕೆ?**

ನರಸತ್ವ ಲಸಿಕೆ ಹಾಗು ಕೃಷಿ ಲಸಿಕೆ – ಎರಡೂ ಲಸಿಕೆಗಳನ್ನು ಶೀತಕದಲ್ಲಿ ಇಡಲೇಬೇಕು. ಇದನ್ನು ಸಾಗಿಸುವಾಗಲೂ ಸೂಕ್ತವಾದ ಥರ್ಮೋಕೋಲ್ (ಉಷ್ಣತೆಯನ್ನು ಕಾಪಾಡುವ) ಡಬ್ಬದಲ್ಲಿಟ್ಟು (ಮಂಜುಗಡ್ಡೆಯಲ್ಲಿ) ತಂಪು ಸರಪಣಿಯನ್ನು (cold chain) ಕಾಪಾಡುವುದು ಅತಿ ಅವಶ್ಯ. ಹೀಗೆ ಮಾಡದಿದ್ದರೆ ಲಸಿಕೆಯು ತನ್ನ ಸತ್ವವನ್ನು ಕಳೆದುಕೊಂಡು ಪರಿಣಾಮಕಾರಿಯಾಗಿರುವುದಿಲ್ಲ. ಇಂತಹ ಸತ್ವಹೀನ ಲಸಿಕೆ ನೀಡುವುದರಿಂದ ಪ್ರಯೋಜನವಿಲ್ಲ.

**ಒ. ನಾಯಿ ಕಚ್ಚಿಸಿಕೊಂಡ ರೋಗಿಯು ಕೃಷಿ ಲಸಿಕೆಯ ಒಂದು ಅಥವಾ ಎರಡು ಗುಟುಕನ್ನು ತೆಗೆದುಕೊಂಡು ನಂತರ ಅದೇ ಲಸಿಕೆಯು (ಉದಾ:- ಹೆಚ್.ಡಿ.ಸಿ.ವಿ./ರಬಿಪುರ್/ವೆರೋರಾಬ್) ಲಭ್ಯವಿಲ್ಲದಿದ್ದರೆ ಏನು ಮಾಡಬೇಕು?**

ಕೃಷಿ ಲಸಿಕೆಗಳನ್ನು ಸುಲಭವಾಗಿ ಬದಲಾಯಿಸಬಹುದು. ಯಾವ ಲಸಿಕೆ ಲಭ್ಯವಿದೆಯೋ ಅದನ್ನೇ ಕೊಡುವುದು. ಆದರೆ ದಿನ 0,3,7,14 ಹಾಗು 30 ವೇಳಾಪಟ್ಟಿಯನ್ನು ಮಾತ್ರ ತಪ್ಪದೆ ಪಾಲಿಸಬೇಕು.

**ಓ. ಕೃಷಿ ಲಸಿಕೆಯನ್ನು ಪಡೆಯುತ್ತಿರುವಾಗ ಕಾರಣಾಂತರದಿಂದ ಒಂದು ಗುಟುಕು ತಪ್ಪಿ ಹೋದರೆ ಏನು ಮಾಡಬೇಕು?**

ಇಂತಹ ಪರಿಸ್ಥಿತಿಯಲ್ಲಿ ಪುನಃ ಮೊದಲಿನಿಂದ 5 ಲಸಿಕೆ ಗುಟುಕನ್ನು ಕೊಡುವ ಅವಶ್ಯಕತೆ ಇಲ್ಲ. ತೆಗೆದುಕೊಳ್ಳಬೇಕಾಗಿದ್ದ ಲಸಿಕೆ ಗುಟುಕನ್ನು ಮೊದಲನೆ ಗುಟುಕಿನಿಂದ ಒಂದು ತಿಂಗಳ ಅವಧಿಯಲ್ಲಿ ಪಡೆಯುವಂತೆ ವೇಳಾಪಟ್ಟಿ ಸ್ವಲ್ಪ ಬದಲಾಯಿಸ ಬೇಕಾಗುತ್ತದೆ. ಇದನ್ನು ವೈದ್ಯರ ತೀರ್ಮಾನಕ್ಕೆ ಬಿಡುವುದು ಒಳ್ಳೆಯದು.

**೩. ನವಜಾತ ಶಿಶುವಿಗೆ ರೇಬೀಸ್ ಲಸಿಕೆ ನೀಡುವುದರಲ್ಲಿ ಏನಾದರೂ ವ್ಯತ್ಯಾಸವಿದೆಯೇ ?**

ಕೃಷಿ ಲಸಿಕೆಗಳಲ್ಲಿ ಲಸಿಕೆ ಗುಟುಕು ಹಾಗು ವೇಳಾಪಟ್ಟಿಯಲ್ಲಿ ಯಾವುದೇ ವ್ಯತ್ಯಾಸ ಇರುವುದಿಲ್ಲ.

ಆದರೆ ನರಸತ್ವ ಲಸಿಕೆಯಲ್ಲಿ ಅದರ ಗುಟುಕು ಸೂಕ್ತವಾಗಿ ಕಡಿಮೆ ಪ್ರಮಾಣದ್ದಾಗಿರುತ್ತವೆ.

**೪೦. ಸಣ್ಣ ಮಕ್ಕಳಲ್ಲಿ ರೇಬೀಸ್ ಲಸಿಕೆ ಪಡೆಯುವಾಗ ಇತರ ಲಸಿಕೆಗಳನ್ನು ಪಡೆಯುವ ಸಮಯವಾಗಿದ್ದರೆ ಏನು ಮಾಡಬೇಕು?**

ಸಾಮಾನ್ಯವಾಗಿ ಎರಡು ವರ್ಷದೊಳಗಿನ ಮಕ್ಕಳಿಗೆ ಇತರೇ ಲಸಿಕೆಗಳಾದ ಬಿ.ಸಿ.ಜಿ., ಪೋಲಿಯೋ, ಟ್ರಿಪಲ್‌ಲಸಿಕೆ(ಡಿ.ಪಿ.ಟಿ) ಹಾಗು ದಡಾರದ ಲಸಿಕೆಗಳನ್ನು ರೇಬೀಸ್ ಲಸಿಕೆ ನೀಡಿದ ಎರಡು ವಾರದ ನಂತರ ಅವುಗಳನ್ನು ನೀಡುವುದು ಒಳ್ಳೆಯದು.

**೪೧. ಗರ್ಭಿಣಿ ಸ್ತ್ರೀಯರಿಗೆ ನಾಯಿಕಚ್ಚಿದರೆ ಲಸಿಕೆ ಕೊಡಬಹುದೇ?**

ಖಂಡಿತ ಕೊಡಬೇಕು. ಇದರಿಂದ ಗರ್ಭದಲ್ಲಿರುವ ಶಿಸುವಿಗೆ ಏನೂ ತೊಂದರೆ ಆಗುವುದಿಲ್ಲ (ಹಾಗು ಈ ಶಿಸುವು ತನ್ನ ತಾಯಿಯಿಂದ ಉಚಿತವಾಗಿ ರಕ್ಷಣಾವಸ್ತುವನ್ನು ಪಡೆಯುತ್ತದೆ.) ಆದರೆ ನರಸತ್ವ ಲಸಿಕೆ ನೀಡಿದರೆ ವೈದ್ಯರು, ಹೊಕ್ಕಳ ಜಾಗದ ಬದಲು ಬೆನ್ನು ಅಥವಾ ತೊಡೆಯಲ್ಲಿ ಕೊಡುತ್ತಾರೆ.

## ೭.೩ ಪ್ರಾಣಿಗಳಲ್ಲಿ ರೇಬೀಸ್

**ಅ. ನಾಯಿಗಳಿಗೆ ಯಾವ ವಯಸ್ಸಿನಿಂದ ಲಸಿಕೆ ಸಂರಕ್ಷಣೆ ನೀಡಲು ಪ್ರಾರಂಭಿಸಬಹುದು?**

ನಾಯಿಮರಿಯಲ್ಲಿ ಎರಡು ತಿಂಗಳ ವಯಸ್ಸಿನವರೆಗೆ ಅದರ ರೋಗ ನಿರೋಧಕ ವ್ಯವಸ್ಥೆ ಪಕ್ವವಾಗಿರುವುದಿಲ್ಲ. ಈ ಮರಿಯ ತಾಯಿಗೆ ಮೊದಲೇ ಮುಂಜಾಗ್ರತೆ ಲಸಿಕೆ ನೀಡಿದ್ದರೆ ಅದರಿಂದ ಉತ್ಪನ್ನಗೊಂಡ ರಕ್ಷಣಾವಸ್ತು ಗರ್ಭದಲ್ಲಿದ್ದಾಗಲೇ ಮರಿಗೆ ರವಾನೆಯಾಗುತ್ತದೆ. ಈ ರಕ್ಷಣಾ ವಸ್ತು ನಾಯಿಮರಿ, ಜನಿಸಿದ ಎರಡು ತಿಂಗಳವರೆಗೆ ಅದರ ದೇಹದಲ್ಲಿ ಇರುತ್ತದೆ. ಈ ರಕ್ಷಣಾ ವಸ್ತು ನಾಯಿಮರಿಗೆ ಯಾವುದೇ ಲಸಿಕೆ ನೀಡಿದರೆ ಅದರಿಂದ ಉತ್ಪನ್ನಗೊಳ್ಳುವ ನವ ರಕ್ಷಣಾ ವಸ್ತುವನ್ನು ಕುಂಠಿತಗೊಳಿಸುತ್ತದೆ. ಆದುದರಿಂದ ಸಾಮಾನ್ಯವಾಗಿ ನಾಯಿಮರಿಗೆ ಎರಡು ತಿಂಗಳು ವಯಸ್ಸಿನ ನಂತರ ಲಸಿಕೆ ನೀಡುವುದು ಸೂಕ್ತ.

**ಆ. ಒಂದು ಲಸಿಕೆ ಪಡೆದ ಸಾಕಿದ ನಾಯಿಯು ಇದ್ದಕ್ಕಿದ್ದಂತೆ ಸಾವಿಗೀಡಾದರೆ ಇಂತಹ ಪರಿಸ್ಥಿತಿಯಲ್ಲಿ ಮನೆಯವರಿಗೆ ಲಸಿಕೆ ಸಂರಕ್ಷಣೆ ನೀಡಬೇಕೆ?**

ನಾಯಿಯ ಮಿದುಳನ್ನು ಪ್ರಯೋಗ ಶಾಲೆಯಲ್ಲಿ ಪರೀಕ್ಷಿಸಿ ರೇಬೀಸ್ ಬಗ್ಗೆ ಖಚಿತವಾಗಿ ನಿರ್ಧಾರ ಮಾಡುವ ಸೌಲಭ್ಯ ಎಲ್ಲಿ ಇದೆಯೋ ಅಲ್ಲಿ ಈ ಪರೀಕ್ಷೆ ಮಾಡಿಸಬೇಕು. ನಂತರ ಅದು ರೇಬೀಸ್‌ನಿಂದ ಸತ್ತಿದೆ ಎಂದು ಖಚಿತವಾದರೆ, ಆ ನಾಯಿಯ ಸಂಪರ್ಕವಿದ್ದವರಿಗೆ ಸೂಕ್ತ ಲಸಿಕೆ ನೀಡುವ ಅವಶ್ಯಕತೆ ಇದೆ. ಎಲ್ಲಿ ಪ್ರಯೋಗ ಶಾಲೆಯ ಸೌಲಭ್ಯ ಇಲ್ಲವೋ ಅಲ್ಲಿ ಆ ನಾಯಿಯು ರೇಬೀಸ್ ಕಾಯಿಲೆಯಿಂದಲೇ ಸತ್ತಿದೆ ಎಂದು ಭಾವಿಸಿ ಅದರ ನಿಕಟ ಸಂಪರ್ಕ ಹೊಂದಿದ್ದವರಿಗೆ ಸೂಕ್ತ ಲಸಿಕೆ ಸಂರಕ್ಷಣೆ ನೀಡುವುದು ಒಳ್ಳೆಯದು.

**ಇ. ಕಚ್ಚಿದ ನಂತರ ನಾಯಿ ಹಾಗು ಬೆಕ್ಕನ್ನು ಹತ್ತು ದಿನ ಗಮನಿಸಬೇಕು ಎಂದು ಯಾವ ಆಧಾರದ ಮೇಲೆ ನಿರ್ಧಾರಿಸಲಾಗಿದೆ?**

ಒಂದು ನಾಯಿಗೆ ಅಥವಾ ಬೆಕ್ಕಿಗೆ ರೇಬೀಸ್ ಇದ್ದರೆ ಅದರಲ್ಲಿ ರೇಬೀಸ್ ಕಾಯಿಲೆ ಲಕ್ಷಣಗಳು ಕಾಣಿಸಿಕೊಳ್ಳುವ 3-4 ದಿನಗಳ

ಮೊದಲು ಅದರ ಜೊಲ್ಲಿನಲ್ಲಿ ರೇಬೀಸ್ ವೈರಸ್ ಇರುತ್ತದೆ. ಇಂತಹ ನಾಯಿಯು/ಬೆಕ್ಕು ನೋಡಲು ಆರೋಗ್ಯವಾಗಿರುವಂತೆ ಕಂಡು ಬರುತ್ತದೆ, ಹಾಗು ಕಚ್ಚಿದರೆ ಅದರಿಂದ ರೇಬಿಸ್ ಬರುವ ಸಾಧ್ಯತೆ ಉಂಟು.

ಈ ನಾಯಿಯಲ್ಲಿ ನಂತರ 5-6 ದಿನದಲ್ಲಿ ರೇಬೀಸ್ ರೋಗ ಲಕ್ಷಣಗಳು ಕಂಡುಬರುತ್ತದೆ, ಹಾಗು ಅದು ಸಾಯುತ್ತದೆ. ಒಟ್ಟು 10 ದಿನ ಒಂದು ನಾಯಿಯನ್ನು (ಕಚ್ಚಿದ ನಂತರ) ಗಮನಿಸಿದರೆ ಅದಕ್ಕೆ ರೇಬೀಸ್‌ರೋಗ ಇಲ್ಲದಿದ್ದರೆ ಅದು ಈ ಅವಧಿಯ ನಂತರವೂ ಆರೋಗ್ಯವಾಗಿರುತ್ತದೆ. ಈ ಆಧಾರದ ಮೇಲೆ ನಾಯಿ ಹಾಗು ಬೆಕ್ಕನ್ನು ಕಚ್ಚಿದ ದಿನದಿಂದ ಹತ್ತು ದಿನ ಕಾಲ ಗಮನಿಸಲು ಹೇಳಲಾಗುತ್ತದೆ.

ಈ ಹತ್ತು ದಿನ ಗಮನಿಸುವ ಸೂತ್ರವು ಬರಿ ನಾಯಿ ಮತ್ತು ಬೆಕ್ಕಿಗೆ ಮಾತ್ರ ಅನ್ವಯಿಸುತ್ತದೆ, ಇತರೇ ಪ್ರಾಣಿಗಳಿಗೆ ಅನ್ವಯಿಸುವುದಿಲ್ಲ.

**ಈ. ಕಚ್ಚಿದ ನಾಯಿಯು ಹತ್ತು ದಿನ ಗಮನಿಸಲು ಸಾಧ್ಯವಿದ್ದಾಗ ಹತ್ತು ದಿನ ಲಸಿಕೆ ಸಂರಕ್ಷಣೆ ಕೊಡುವುದನ್ನು ತಡೆಹಿಡಿಯಬಹುದೇ?**

ಸಾಮಾನ್ಯವಾಗಿ ನಮ್ಮ ದೇಶದಲ್ಲಿ ರೇಬೀಸ್ ರೋಗ ವ್ಯಾಪಕವಾಗಿ ಪ್ರಾಣಿಗಳಲ್ಲಿದ್ದು, ಕಚ್ಚಿದರೆ ಅವು ಅಪಾಯಕಾರಿಯೇ. ಅದರಲ್ಲೂ ಅದು ರಸ್ತೆ ನಾಯಿ ಹಾಗು ಲಸಿಕೆ ಪಡೆಯದಿದ್ದರೆ ಇನ್ನು ಹೆಚ್ಚು ಗಂಡಾಂತರಕಾರಿ ಎನ್ನಬಹುದು. ಇಂತಹ ಪರಿಸ್ಥಿತಿಯಲ್ಲಿ ಯಾವುದೇ ನಾಯಿ ಆಗಲಿ (ಸಾಕಿದ ನಾಯಿ, ಲಸಿಕೆಯಿಂದ ಸಂರಕ್ಷಿಸಿದ ನಾಯಿಯಾದರೂ) ಕೂಡಲೇ ಲಸಿಕೆ ಚಿಕಿತ್ಸೆ ಶುರುಮಾಡುವುದು ಸೂಕ್ತ, ಹಾಗು ರಕ್ಷಣಾತ್ಮಕ. ಐದು ದಿನದ ನಂತರ ಆ ನಾಯಿಯು ಬದುಕಿದ್ದು, ಆರೋಗ್ಯವಾಗಿದ್ದರೆ ಮುಂದಿನ ಲಸಿಕೆಗಳನ್ನು ನೀಡುವ ಅವಶ್ಯಕತೆ ಇರುವುದಿಲ್ಲ.

ಆದರೆ ಆರನೇ ದಿನದಿಂದ ಹತ್ತನೇ ದಿನದಲ್ಲಿ ಆ ನಾಯಿಯು ಸತ್ತರೆ ಹಾಗು ರೇಬೀಸ್ ರೋಗದ ಪರೀಕ್ಷೆ ಪ್ರಯೋಗಶಾಲೆ ಸೌಲಭ್ಯವಿರದಿದ್ದರೆ, ಉಳಿದ ಲಸಿಕೆ ಗುಟುಕುಗಳನ್ನು ವೇಳಾಪಟ್ಟಿಯಂತೆ ನೀಡಬೇಕಾಗುತ್ತದೆ. ಮೊದಲಿನಿಂದ ಪ್ರಾರಂಭಿಸುವ ಅಗತ್ಯವಿಲ್ಲ.

**ಉ. ಒಂದು ಹುಚ್ಚು ನಾಯಿಯು ಹಸುವನ್ನು ಕಚ್ಚುತ್ತದೆ. ಆ ಹಸುವಿನ ಹಾಲನ್ನು ಕುಡಿದರೆ ರೇಬೀಸ್ ಕಾಯಿಲೆ ಬರುತ್ತದೆಯೇ?**

ಹಸುವಿಗೆ ರೇಬೀಸ್ ಬಂದರೆ ಅದರ ಹಾಲಿನಲ್ಲಿ ರೇಬೀಸ್ ವೈರಸ್ ಇರುತ್ತದೆ. ಕಾಯಿಸದೆ ಇದ್ದ ಹಾಲನ್ನು ಕುಡಿದರೆ ರೇಬೀಸ್ ಬರುವ ಸಾಧ್ಯತೆ ಉಂಟು. ಅಂತಹ ವ್ಯಕ್ತಿಗಳಿಗೆ ಲಸಿಕೆ ಸಂರಕ್ಷಣೆ ನೀಡಬೇಕಾಗುತ್ತದೆ. ಆದರೆ ಸಾಮಾನ್ಯವಾಗಿ ಕಾಯಿಸುವುದರಿಂದ (ಕುದಿಸುವುದರಿಂದ) ರೇಬೀಸ್ ವೈರಸ್ ನಿಸ್ಸಂದೇಹವಾಗಿ ನಿಷ್ಕ್ರಿಯೆಗೊಳ್ಳುತ್ತದೆ. ಹಾಗೂ ಇಂತಹ ಕಾಯಿಸಿದ/ಕುದಿಸಿದ ಹಾಲು ಖಂಡಿತ ಅಪಾಯಕಾರಿ ಅಲ್ಲ, ಹಾಗೂ ಈ ಹಾಲು ಕುಡಿದವರಿಗೆ ಲಸಿಕೆ ಪಡೆಯುವ ಅವಶ್ಯಕತೆ ಇಲ್ಲ.

**ಊ. ಒಂದು ಸಾಕಿದ ನಾಯಿಯು ರೋಗ ನಿರೋಧಕ ಮುಂಜಾಗ್ರತೆ ಸಂರಕ್ಷಣೆ ಲಸಿಕೆ ಪಡೆಯದೆ ಇದ್ದು ಹಾಗೂ ಆ ನಾಯಿಯು ಒಂದು ಹುಚ್ಚು ನಾಯಿಯಿಂದ ಕಚ್ಚಲ್ಪಟ್ಟರೆ ಏನು ಮಾಡಬೇಕು.?**

ಅತ್ಯುತ್ತಮ ಪರಿಹಾರ ಎಂದು ಈ ನಾಯಿಯನ್ನು ಮಾನವೀಯತೆ, ಮಾರ್ಗೋಪಾಯವಾಗಿ ನಿರ್ಮೂಲನೆಗೊಳಿಸಬೇಕು. ಆದರೆ ಇದು ಸಾಮಾನ್ಯವಾಗಿ ಸಾಧ್ಯವಿಲ್ಲ ಹಾಗೂ ಬಹುತೇಕ ನಾಯಿಯನ್ನು ಸಾಕಿದವರು ಇವಕ್ಕೆ ಒಪ್ಪುವುದಿಲ್ಲ. ಆದುದರಿಂದ ಈ ನಾಯಿಗಳಿಗೆ ಲಸಿಕೆ ರಕ್ಷಣೆ ನೀಡಬೇಕು. ನಂತರ ಸಾಕಿದವರು(ನಾಯಿಗೆ ಲಸಿಕೆ ನೀಡಿದ್ದರೂ) ನಾಯಿಯನ್ನು ಆರು ತಿಂಗಳ ಕಾಲ ಎಚ್ಚರಿಕೆಯಿಂದ ರೇಬೀಸ್ ಕಾಯಿಲೆಯ ಚಿಹ್ನೆಗಳಿಗೆ ಗಮನಿಸಬೇಕು, ಹಾಗೂ ನಾಯಿಯಿಂದ ದೂರವಿರಬೇಕು.

**ಋ. ರೇಬೀಸ್ ಇರುವ ಹುಚ್ಚು ನಾಯಿ ಕಡಿದಾಗ ಲಸಿಕೆ ಪಡೆಯದೇ ಇದ್ದರೂ ರೇಬೀಸ್ ಬರದಿರುವ ಸಾಧ್ಯತೆ ಉಂಟೋ/ಬದುಕಲು ಸಾಧ್ಯವೇ?**

ಹುಚ್ಚು ನಾಯಿ ಕಡಿದರೂ ಯಾವುದೇ ಚಿಕಿತ್ಸೆ ಪಡೆಯದೆ, ರೇಬೀಸ್ ರೋಗಕ್ಕೆ ತುತ್ತಾಗದೆ ಪಾರಾದ ವ್ಯಕ್ತಿಗಳು ಅಪರೂಪಕ್ಕೆ ಗಮನಕ್ಕೆ ಬರಬಹುದು. ಇದಕ್ಕೆ ಕಾರಣವೇನೆಂದರೆ, ಹುಚ್ಚು ನಾಯಿ ಕಡಿತಕ್ಕೊಳಗಾದ ಶೇಕಡ 15ರಷ್ಟು ಜನ ಈ ಕಾಯಿಲೆಗೆ ತುತ್ತಾಗುತ್ತಾರೆ.

ಹುಚ್ಚು ನಾಯಿಯ ಜೊಲ್ಲಿನಲ್ಲಿ ದಿನದ 24 ಗಂಟೆಗಳ ಕಾಲವು ರೇಬೀಸ್ ವಿಷಾಣು ಇಲ್ಲದಿರುವುದು. ಹುಚ್ಚುನಾಯಿ ಜೊಲ್ಲು ಗ್ರಂಥಿಗಳಲ್ಲಿ ಹಾಗು ಜೊಲ್ಲಿನಲ್ಲಿ ಎಲ್ಲಾ ಕಾಲ ರೇಬೀಸ್ ವೈರಸ್‌ಕಂಡುಬರುವುದಿಲ್ಲ. ಆದುದರಿಂದ ಆ ಸಮಯದಲ್ಲಿ ಅದು ಯಾರನ್ನು ಕಚ್ಚುತ್ತದೆಯೋ ಅವರು ಅದೃಷ್ಟವಂತರು, ಆ ವ್ಯಕ್ತಿಗಳು ಅಥವಾ ಪ್ರಾಣಿಗಳು ರೇಬೀಸ್‌ನಿಂದ ಪಾರಾಗುತ್ತಾರೆ. ಇನ್ನುಳಿದ ಸಮಯದಲ್ಲಿ (ಜೊಲ್ಲು ಗ್ರಂಥಿಗಳಲ್ಲಿ ವಿಷಾಣು ಇದ್ದಾಗ) ಅದು ಯಾರನ್ನು ಕಡಿಯುತ್ತದೋ ಅವರು ಕಾಯಿಲೆಗೆ ಬಲಿಯಾಗುತ್ತಾರೆ. ಆದರೂ, ನಾಯಿಯು ಕಚ್ಚಿದಾಗ ಅದರ ಜೊಲ್ಲಿನಲ್ಲಿ ರೇಬೀಸ್ ವಿಷಾಣುಗಳು ಇದ್ದವೊ ಇಲ್ಲವೊ ಎಂಬುದನ್ನು ಪತ್ತೆಹಚ್ಚುವುದು ಅಸಾಧ್ಯವಾದ್ದರಿಂದ, ಹಾಗು ರೇಬೀಸ್ ರೋಗ ಶೇಕಡ 100ರಷ್ಟು ಮರಣಾಂತಕವಾಗಿರುವುದರಿಂದ, ಕೂಡಲೆ ಚಿಕಿತ್ಸೆ ಕೈಗೊಳ್ಳುವುದೇ ಕ್ಷೇಮ.

**ಎ. ಮುಂಜಾಗ್ರತೆ ಲಸಿಕೆಯಿಂದ ರಕ್ಷಿಸಲ್ಪಟ್ಟ ನಾಯಿಯು ರೇಬೀಸ್ ಕಾಯಿಲೆಗೆ ತುತ್ತಾಗಿ ಕಾಯಿಲೆಯನ್ನು ಹರಡುವಸಾಧ್ಯತೆ ಉಂಟೇ?**

ಬಹುತೇಕ ಸರಿಯಾದ ಶಕ್ತಿ ಸಾಮರ್ಥ್ಯ ಉಳ್ಳ ಲಸಿಕೆಗಳನ್ನು ಸರಿಯಾದ ವಿಧ/ಕ್ರಮದಲ್ಲಿ ನೀಡಿದ್ದರೆ ಆ ಪ್ರಾಣಿ ರಕ್ಷಣೆ ಪಡೆದಿರುತ್ತದೆ. ಹಾಗು ರೇಬೀಸ್ ಬರದಂತೆ ತಡೆಯುವ ಶಕ್ತಿ ಹೊಂದಿರುತ್ತದೆ. ಇದನ್ನು ಪರೀಕ್ಷಿಸಿತಿಳಿಯಲು, ನಾಯಿಯ ರಕ್ತ ಪರೀಕ್ಷೆ ಮಾಡಬೇಕಾಗುತ್ತದೆ. ಆದರೆ ಇದರ ಸೌಲಭ್ಯ ಕೆಲವೆಡೆ ಮಾತ್ರ ಲಭ್ಯ. ಆದರೆ ಲಸಿಕೆಗಳನ್ನು ಸರಿಯಾಗಿ ಶೀತಕಗಳಲ್ಲಿ ಇಡದಿದ್ದರೆ ಅವುಗಳು ತಮ್ಮ ಶಕ್ತಿ ಕಳೆದುಕೊಂಡು, ಅಸಮರ್ಥವಾಗುತ್ತವೆ. ಅಂತಹ ಶಕ್ತಿಹೀನ ಲಸಿಕೆ ಮೇಲುನೋಟದಿಂದ ಗುರುತಿಸಲು ಸಾಧ್ಯವಿಲ್ಲ. ಇಂತಹ ಲಸಿಕೆ ನೀಡಿದರೆ ನಾಯಿಗೆ ರಕ್ಷಣೆ ಬರುವುದಿಲ್ಲ. ಈ ಹಿನ್ನಲೆಯಲ್ಲಿ ಒಮ್ಮೊಮ್ಮೆ ನಾಯಿಗೆ ಲಸಿಕೆ ನೀಡಿರುವ ದಾಖಲೆ ಇದ್ದರೂ ಅವುಗಳು, ಹುಚ್ಚು ನಾಯಿಯ ಕಡಿತದಿಂದ ರೇಬೀಸ್ ಬರುವ ಸಂಭವವಿದೆ. ಆದುದರಿಂದ ಲಸಿಕೆಯಿಂದ ಸಂರಕ್ಷಿಸಿರುವ ನಾಯಿಯು ಕಚ್ಚಿದರೂ ಸಹ ತಕ್ಷಣ ನಮ್ಮ ದೇಶದಲ್ಲಿ ವ್ಯಕ್ತಿಗೆ ಲಸಿಕೆ ಚಿಕಿತ್ಸೆ ಪ್ರಾರಂಭ ಮಾಡುವುದು ಕ್ಷೇಮ.

**ಎ. ರೇಬೀಸ್ ರೋಗವಾಹಕ ಆರೋಗ್ಯ ನಾಯಿಗಳು (ಕ್ಯಾರಿಯರ್ ಡಾಗ್ಸ್) ಇವೆಯೇ?**

ರೇಬೀಸ್ ರೋಗವಾಹಕವಾಗಿ ಆರೋಗ್ಯವಂತ ನಾಯಿಗಳು ಇವೆಯೆಂದು ಅತಿ ವಿರಳವಾದ ಉಲ್ಲೇಖನಗಳು ದೊರೆತಿವೆ. ಇಂತಹ ನಾಯಿಗಳು ನೋಡಲು ಆರೋಗ್ಯವಾಗಿದ್ದು ಅವುಗಳ ಜೊಲ್ಲಿನಲ್ಲಿ ವೈರಸ್ ವಿಷಾಣು ಇರುತ್ತದೆ. ಈ ನಾಯಿಗಳು ಎಲ್ಲಾ ನಾಯಿಗಳಂತೆ ಬದುಕುತ್ತವೆ. ಹಾಗು (ರೋಗಗ್ರಸ್ಥ ನಾಯಿಗಳಂತೆ) ಹತ್ತು ದಿನಗಳೊಳಗೆ ಸಾಯುವುದಿಲ್ಲ. ಇಂತಹ ನಾಯಿಗಳು ಕಚ್ಚಿದರೆ ಮನುಷ್ಯನಿಗೆ ರೇಬೀಸ್ ಬರುವ ಸಾಧ್ಯತೆ ಇದೆ. ಮನುಷ್ಯ ಸಾಯುತ್ತಾನೆ. ಆದರೆ ನಾಯಿ ಮಾತ್ರ ಬದುಕಿರುತ್ತದೆ. ಆದರೆ ಇದು ಅತಿ ವಿರಳ ಹಾಗು ಪ್ರಕೃತಿಯ ವಿಲಕ್ಷಣತೆ ಎಂದು ತಿಳಿಯಲಾಗಿದೆ. ಆದುದರಿಂದ ಯಾವುದೇ ನಾಯಿ ಕಚ್ಚಿದರೆ. ತಕ್ಷಣ ಲಸಿಕೆ ಚಿಕಿತ್ಸೆ ಶುರುಮಾಡುವುದಲ್ಲದೆ, ಹತ್ತು ದಿನದ ನಂತರ ಆ ನಾಯಿಯು ಜೀವಂತ ಇದ್ದರೆ ಅದಕ್ಕೆ ರೇಬೀಸ್ ಇಲ್ಲವೆಂದು ನಿರ್ಧರಿಸಿ ಮುಂದಿನ ಲಸಿಕಾ ಚಿಕಿತ್ಸೆ ನಿಲ್ಲಿಸಲಾಗುತ್ತದೆ. ಇದು ಇತ್ತೀಚಿನ 1993 ವಿಶ್ವ ಆರೋಗ್ಯ ಸಂಸ್ಥೆಯ ಶಿಫಾರಸು ಕೂಡ ಆಗಿರುತ್ತದೆ.

**ಐ. ಭಾರತದಲ್ಲಿ ಬಾವಲಿಯಿಂದ ರೇಬೀಸ್ ಬಂದಿದೆಯೆ?**

ಇಲ್ಲ. ಇದು ಲ್ಯಾಟಿನ್ ಅಮೆರಿಕ ಹಾಗು ಉತ್ತರ ಅಮೆರಿಕದ ಕೆಲವು ದೇಶಗಳಲ್ಲಿ ಕಂಡುಬಂದಿದೆ.

**ಒ. ರೇಬೀಸ್ ಕಾಯಿಲೆಯಿರುವ ಪ್ರಾಣಿಗಳಲ್ಲಿ, ಮನುಷ್ಯನಂತೆ, ಜಲಭಯ ರೋಗಲಕ್ಷಣ ಇರುತ್ತದೆಯೇ?**

ಇಲ್ಲ

# ಉಲ್ಲೇಖ ಹಾಗು ಓದಲು ಶಿಫಾರಸಿದ ಪುಸ್ತಕಗಳು

1. ಕಾಲಿನ್ ಕಾಪ್ಲಾನ್ ಹಾಗು ಇತರರು (1986) ರೇಬೀಸ್ ಕೆಲವು ವಿಷಯಗಳು (The Facts), ಆಕ್ಸಫರ್ಡ್ ವಿಶ್ವವಿದ್ಯಾಲಯ ಮುದ್ರಣಾಲಯ, ಇಂಗ್ಲೆಂಡ್ (ಆಂಗ್ಲ ಭಾಷೆಯಲ್ಲಿ).

2. ಸರಳಜೀತ್ ಸೆಹಗಲ್ ಹಾಗು ರಾಜೇಶ್ ಭಾಟಿಯ (1985) ರೇಬೀಸ್, ರಾಷ್ಟ್ರೀಯ ಸಾಂಕ್ರಾಮಿಕರೋಗ ಸಂಸ್ಥೆ, ಹಳೇ ದೆಹಲಿ 110054 (ಆಂಗ್ಲ ಭಾಷೆಯಲ್ಲಿ).

3. ಹರಮಿಂದರ್ ಸಿಂಗ್ ಹಾಗೂ ರಾಜೇಶ್ ಭಾಟಿಯಾ (1993) ರೇಬೀಸ್ ಸಾಮಾನ್ಯ ಪ್ರಶ್ನೆಗಳಿಗೆ ಉತ್ತರಗಳು, ಕೇಂದ್ರೀಯ ಅನುಸಂಧಾನ ಸಂಸ್ಥೆ, ಕಸೌಲಿ, ಹಿಮಾಚಲ ಪ್ರದೇಶ 173204 (ಆಂಗ್ಲಭಾಷೆಯಲ್ಲಿ).

4. ರೇಬೀಸ್ ಬಗ್ಗೆ ತಿಳಿವಳಿಕೆ, ಕೈಪಿಡಿ, ಹೆಕ್ಸ್ಟ್ ಇಂಡಿಯಾ ಲಿಮಿಟೆಡ್, ಹೈದರಗುಡ, ಹೈದರಾಬಾದ್ 500029 (ಕನ್ನಡದಲ್ಲಿ).

5. ಡಾ. ಬಿ.ಪಿ.ಬೀಜೂರ್ (1992), ರೇಬೀಸ್ ನಿಯಂತ್ರಿಸುವುದು ಹೇಗೆ, ಲೇಖನ ತರಂಗ, 18ನೇ ಅಕ್ಟೋಬರ್ 1992, ಮಣಿಪಾಲ.

# ಅನುಬಂಧ – I

**ಭಾರತದಲ್ಲಿ ರೇಬೀಸ್ ಲಸಿಕೆ (ಮನುಷ್ಯನ/Human) ಉತ್ಪಾದಿಸುವ ಸಂಸ್ಥೆಗಳು.**

1. ಹಾಫ್‌ಕಿನ್ ಸಂಸ್ಥೆ, ಪರೇಲ್, ಮುಂಬಯಿ 400 012.
2. ಕೇಂದ್ರೀಯ ಸಂಶೋಧನಾ ಸಂಸ್ಥೆ, ಕಸೌಲಿ, ಹಿಮಾಚಲ ಪ್ರದೇಶ 173 204.
3. ಪ್ಯಾಶ್ಚರ್ ಸಂಸ್ಥೆ, ಕೂನೂರ್, ತಮಿಳುನಾಡು 643 102
4. ಲಸಿಕೆ ಸಂಸ್ಥೆ, ಅಂಚೆಪೆಟ್ಟಿಗೆ 107, ಬರೋಡ, ಗುಜರಾತ್ 390007
5. ಪಾಶ್ಚರ್ ಸಂಸ್ಥೆ 2, ಕಾನ್ವೆಂಟ್ ರಸ್ತೆ, ಕಲ್ಕತ್ತ 700 015
6. ಸರ್ಕಾರಿ ಲಸಿಕಾ ಸಂಸ್ಥೆ, ನಾಮ್‌ಕುಮ್, ರಾಂಚಿ ಬಿಹಾರ 838 410
7. ರಾಜ್ಯ ಲಸಿಕೆ ಸಂಸ್ಥೆ, ಪತ್ವದ ನಗರ, ನೈನಿತಾಲ್, ಉತ್ತರ ಪ್ರದೇಶ 263 128
8. ಪ್ಯಾಶ್ಚರ್ ಸಂಸ್ಥೆ, ಶಿಲ್ಲಾಂಗ್, ಮೇಘಾಲಯ, 793 001
9. ಸಾರ್ವಜನಿಕ ಆರೋಗ್ಯ ಪ್ರಯೋಗ ಶಾಲೆ, ರೆಡ್‌ಕ್ರಾಸ್ ರಸ್ತೆ, ತಿರುವನಂತಪುರ 695 001 ಕೇರಳ
10. ರೋಗ ನಿರೋಧಕ ವೈದ್ಯಶಾಸ್ತ್ರ ಸಂಸ್ಥೆ, ನಾರಾಯಣಗುಡ, ಹೈದರಾಬಾದ್ 500 029
11. ಕಿಂಗ್ ರೋಗ ನಿರೋಧಕ ವೈದ್ಯಶಾಸ್ತ್ರ ಸಂಸ್ಥೆ, ಗಿಂಡಿ ಮದರಾಸು 600 032.
12. ಲಸಿಕಾ ಸಂಸ್ಥೆ, ಬೆಳಗಾವಿ, ಕರ್ನಾಟಕ – 590 006.

13. ಹೆರ್ಸ್ಟ್ ಇಂಡಿಯಾ, ಅಂಕಲೇಶ್ವರ, ಗುಜರಾತ 393 002 (ರಬೀಪುರ್ – ಪಿ.ಸಿ.ಇ.ಸಿ. ಕೃಷಿಲಸಿಕೆ)
14. ಭಾರತೀಯ ಪ್ಯಾಶ್ಚರ್ ಸಂಸ್ಥೆ, ಕೂನೂರ್, ತಮಿಳುನಾಡು 643103 (ವಿರೋಸೆಲ್ ಕೃಷಿ ಲಸಿಕೆ, ಮಾರುಕಟ್ಟೆಯಲ್ಲಿ ಇನ್ನು ಲಭ್ಯವಿಲ್ಲ)

## ಅನುಬಂಧ – II

**ಭಾರತದಲ್ಲಿ ರೇಬೀಸ್ ರೋಗ ಲಕ್ಷಣ ಗುರುತಿಸುವ ಪ್ರಯೋಗ ಶಾಲೆಗಳು.**

1. ಹರಿಯಾಣ ಕೃಷಿ ವಿಶ್ವವಿದ್ಯಾಲಯ, ಹಿಸ್ಸಾರ್, ಹರಿಯಾಣ.
2. ಸಾಂಕ್ರಾಮಿಕ ರೋಗ ತಪಾಸಣೆ ಕೇಂದ್ರ, ಪುಣೆ, ಮಹಾರಾಷ್ಟ್ರ.
3. ಪಾಶ್ಚರ್ ಕೇಂದ್ರ, ಶಿಲ್ಲಾಂಗ್, ಮೇಘಾಲಯ.
4. ಸಾಂಕ್ರಾಮಿಕ ರೋಗ ತಪಾಸಣೆ ಕೇಂದ್ರ, ರಾಯಪುರ, ಮಧ್ಯಪ್ರದೇಶ.
5. ಎಸ್.ಎಂ.ಎಸ್. ವೈದ್ಯಕೀಯ ವಿದ್ಯಾಲಯ, ಜಯಪುರ, ರಾಜಸ್ಥಾನ.
6. ಕೇಂದ್ರೀಯ ರಕ್ಷಣ ಪಶು ಸಂಶೋಧನಾಲಯ, ಮೀರತ್ ದಂಡು, ಉತ್ತರ ಪ್ರದೇಶ.
7. ಪಶುವೈದ್ಯಶಾಲೆ, ಮೊಹ, ಮಧ್ಯಪ್ರದೇಶ.
8. ಪಶುವೈದ್ಯಶಾಲೆ, ತಿರುವನಂತಪುರ, ಕೇರಳ.
9. ಸಾಂಕ್ರಾಮಿಕ ರೋಗ ತಪಾಸಣೆ ಸಂಸ್ಥೆ, ಕಲ್ಕತ್ತಾ.
10. ರಾಷ್ಟ್ರೀಯ ಸಾಂಕ್ರಾಮಿಕ ರೋಗ ಸಂಸ್ಥೆ, ಹಳೆದೆಹಲಿ – 110054.
11. ಸಾಂಕ್ರಾಮಿಕ ರೋಗ ಆಸ್ಪತ್ರೆ, ಮದರಾಸು.

12. ಕೇಂದ್ರೀಯ ಅನುಸಂಧಾನ ಸಂಸ್ಥೆ, ಕಸೌಲಿ, ಹಿಮಾಚಲ ಪ್ರದೇಶ – 173204.
13. ಪ್ಯಾಶ್ಚರ್ ಸಂಸ್ಥೆ, ಕೂನ್ನೂರು, ತಮಿಳುನಾಡು – 643103.
14. ಸರ್ಕಾರಿ ಪಶುವೈದ್ಯಶಾಲೆ, ರೋಗಶಾಸ್ತ್ರ ವಿಭಾಗ, ಹೆಬ್ಬಾಳ, ಬೆಂಗಳೂರು – 560 029.

# ಅನುಭಂಧ – III

**ಭಾರತದಲ್ಲಿ ರೇಬೀಸ್ ಲಸಿಕೆ (ಪಶು/Veterinary) ಉತ್ಪಾದಿಸುವ ಕೇಂದ್ರಗಳು.**

1. ಪಶು ವಿಜ್ಞಾನ ಹಾಗು ಸಂಶೋಧನಾ ಸಂಸ್ಥೆ, ಹೈದರಾಬಾದ್ – 500 028.
2. ಹರಿಯಾಣ ಪಶು ಲಸಿಕಾ ಸಂಸ್ಥೆ, ಹಿಸ್ಸಾರ್ – 125 004.
3. ಜೀವಶಾಸ್ತ್ರ ಹಾಗೂ ಲಸಿಕಾ ಸಂಸ್ಥೆ, ರಾಸಲಪುರ, ಮೊಹ – 453 446 ಮಧ್ಯಪ್ರದೇಶ.
4. ಪಶು ರೋಗ ನಿರೋಧಕ ವೈದ್ಯಶಾಸ್ತ್ರ ಸಂಸ್ಥೆ, ರಾಣಿಪೇಟೆ - 632403 ತಮಿಳುನಾಡು.
5. ಪಶು ಆರೋಗ್ಯ ಹಾಗು ಜೀವಶಾಸ್ತ್ರ ಸಂಸ್ಥೆ, ಹೆಬ್ಬಾಳ, ಬೆಂಗಳೂರು – 560 029, ಕರ್ನಾಟಕ.
6. ಪಂಜಾಬ್ ಪಶು ಲಸಿಕೆ ಉತ್ಪಾದನಾಸಂಸ್ಥೆ, ಪಂಜಾಬ್ ಕೃಷಿವಿಶ್ವ ವಿದ್ಯಾಲಯ, ಲೂಧಿಯಾನ–141001.
7. ಜೀವಶಾಸ್ತ್ರ ಹಾಗು ಲಸಿಕಾಸಂಸ್ಥೆ, ಪಶುಸಂಗೋಪಣೆ ನಿರ್ದೇಶನಾಲಯ, ಜಯಪುರ, ರಾಜಸ್ಥಾನ–302001.
8. ಪಶು ಜೀವಶಾಸ್ತ್ರ ಹಾಗು ಲಸಿಕಾ ಸಂಸ್ಥೆ, ಪೂಣೆ – 411 007, ಮಹಾರಾಷ್ಟ್ರ.
9. ಜೀವಶಾಸ್ತ್ರ ಹಾಗು ಲಸಿಕಾ ಸಂಸ್ಥೆ, ಭಾರತೀಯ ಪಶುವೈದ್ಯ ಸಂಶೋಧನ ಕೇಂದ್ರ, ಇಜ್ಜಾಟ್‌ನಗರ – 243 122, ಉತ್ತರಪ್ರದೇಶ.

# ಅನುಬಂಧ – IV

**ರೇಬೀಸ್ ಬಗ್ಗೆ ಹೆಚ್ಚಿನ ಮಾಹಿತಿಗಾಗಿ ಸಂಪರ್ಕಿಸಿ :**

**ಕರ್ನಾಟಕದಲ್ಲಿ**

1. ಡಾ. ಆರ್.ಎನ್. ಶ್ರೀನಿವಾಸ ಗೌಡ,
ಪ್ರಾಧ್ಯಾಪಕರು ಹಾಗು ವಿಭಾಗ ಮುಖ್ಯಸ್ಥರು,
ಪಶುರೋಗಶಾಸ್ತ್ರ ವಿಭಾಗ, ಸರ್ಕಾರಿ ಪಶುವೈದ್ಯಕಾಲೇಜು, ಹೆಬ್ಬಾಳ,
ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು – 560 024.
ದೂರವಾಣಿ – 3331483 (ಕಛೇರಿ), 3332497 (ಮನೆ)

2. ಡಾ. ಎಸ್.ಎನ್. ಮಧುಸೂಧನ,
ಸಹಾಯಕ ಪ್ರಾಧ್ಯಾಪಕರು, ನರಜೀವಾಣು ಶಾಸ್ತ್ರ ವಿಭಾಗ,
ರಾಷ್ಟ್ರೀಯ ಮಾನಸಿಕ ಹಾಗು ನರರೋಗ ವಿಜ್ಞಾನಸಂಸ್ಥೆ
(NIMHANS), ಹೊಸೂರು ರಸ್ತೆ, ಬೆಂಗಳೂರು - 560 029.
ದೂರವಾಣಿ – 642121-321 (ಕಛೇರಿ), 6634374 (ಮನೆ).

3. ಡಾ. ಎಂ.ಕೆ. ಸುದರ್ಶನ್
ಪ್ರಾಧ್ಯಾಪಕರು ಹಾಗು ವಿಭಾಗ ಮುಖ್ಯಸ್ಥರು,
ಸಮುದಾಯ ವೈದ್ಯಶಾಸ್ತ್ರ ವಿಭಾಗ ಹಾಗು ರೇಬೀಸ್ ಮಾಹಿತಿಕೇಂದ್ರ.
ಕೆಂಪೇಗೌಡ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು 560004.
ದೂರವಾಣಿ – 603560.(ಕಛೇರಿ) 628384 (ಮನೆ)
ಫ್ಯಾಕ್ಸ್ – 080-6600440.

4. ಮುಖ್ಯ ವೈದ್ಯಾಧಿಕಾರಿ
ಸಾಂಕ್ರಾಮಿಕ ರೋಗ ಆಸ್ಪತ್ರೆ,
ಹಳೆ ಮದರಾಸು ರಸ್ತೆ, ಬೆಂಗಳೂರು – 560 038.
ದೂರವಾಣಿ – 571258.

5. ಜಂಟಿ ನಿರ್ದೇಶಕರು,
ಲಸಿಕೆ ಸಂಸ್ಥೆ,
ಬೆಳಗಾವಿ – 590 006.
ದೂರವಾಣಿ – 20052.

**ಹೊರ ರಾಜ್ಯಗಳಲ್ಲಿ**

1. ನಿರ್ದೇಶಕರು,
ಕೇಂದ್ರೀಯ ಅನುಸಂಧಾನ ಸಂಸ್ಥೆ,
ಕಸೌಲಿ, ಹಿಮಾಚಲ ಪ್ರದೇಶ – 173 204.

2. ನಿರ್ದೇಶಕರು,
ಭಾರತೀಯ ಪ್ಯಾಶ್ಚರ್ ಸಂಸ್ಥೆ,
ಕೂನೂರು, ನೀಲಗಿರೀಸ್, ತಮಿಳುನಾಡು – 643 103.

3. ನಿರ್ದೇಶಕರು,
ರಾಷ್ಟ್ರೀಯ ಸಾಂಕ್ರಾಮಿಕ ರೋಗ ಸಂಸ್ಥೆ,
22, ಶಾಮನಾಥ ಮಾರ್ಗ,
ಹಳೇ ದೆಹಲಿ – 110054.

4. ನಿರ್ದೇಶಕರು,
ಪ್ರಾಣಿ ರೋಗ ಶಾಸ್ತ್ರ ವಿಭಾಗ,
ಭಾರತೀಯ ಪಶುಸಂಶೋಧನೆ ಸಂಸ್ಥೆ,
ಇಜ್ಜಟ್ ನಗರ. ಉತ್ತರಪ್ರದೇಶ 243 122.

# ಪಾರಿಭಾಷಿಕ ಪದಗಳು

| | | |
|---|---|---|
| ಅವಯವ | - | Organ |
| ಅನಾಹುತ | - | Complication |
| ಅಂಗಸತ್ವ | - | Tissue |
| ಅಂಗಸತ್ವ ಕೃಷಿ ಲಸಿಕೆ | - | Tissue Culture Vaccine |
| ಅಂಡಲೆಯುವ | - | Stray |
| ಅರಣ್ಯ | - | Sylvatic |
| ಆಮ್ಲ | - | Acid |
| ಆಲ್ಕೊಹಾಲ್ | - | Spirit |
| ಆಮ್ರ | - | Broth |
| ಆಘ್ರಾಣಿಸಿ | - | Inhale |
| ಉಪಯೋಗಿಸಿ ಬಿಸಾಡುವ | - | Disposable |
| ಊದುಪಕೆ | - | Swelling/Edema |
| ಒಳರೋಗಿ | - | Inpatient |
| ಔಷಧೋಪಚಾರ | - | Medical & Nursing Care |
| ಕಸರತ್ತು | - | Physical Training |
| ಕೃಷಿ | - | Culture |
| ಕೆರೆತ/ನವೆ | - | Itching |
| ಕೋಳಿ ಭ್ರೂಣ | - | Chick Embryo |
| ಕಾಂತಿಯುತ ಸೂಕ್ಷ್ಮದರ್ಶಕ | - | Fluoroscent Microscope |
| ಕ್ಷಾರ | - | Alkali |
| ಗಂಡಾಂತರ | - | Risk |
| ಗಾಳಿಭಯ | - | Aerophobia |
| ಗುಟುಕು | - | Dose |
| ಗೊಬ್ಬರ | - | Compost |
| ಚಳಕು | - | Cramps |
| ಚರ್ಮ ಪ್ರಸಾದನಕಾರರು | - | Taxidermists |
| ಚರ್ಮದ ಕೆಳಗೆ | - | Subcutaneous |
| ಚುರುಕು | - | Irritation |
| ಚುಚ್ಚಿ ಲೇಪನ | - | Infilatrate |

ಚುಚ್ಚು ಮದ್ದು/ಲಸಿಕೆ - Vaccine
ಜಲಭಯ - Hydrophobia
ಜೊಲ್ಲು - Saliva
ಜೊಲ್ಲುಗ್ರಂಥಿ - Salivary Gland
ಜೋಮು - Tingling/Numbness
ತಂತಿಸುರಳಿ - Wire Loop
ತಂಪುಸರಪಣಿ - Cold Chain
ತಿಳಿಸುವ ಕಾಯಿಲೆ - Notifiable Disease
ತುಂತುರು - Aerosol
ಧ್ವನಿಪೆಟ್ಟಿಗೆ - Larynx
ನರಪದರ - Axoplasm
ನರಕೋಶ - Nervecell
ನರವ್ಯವಸ್ಥೆ - Nervous System
ನರಸತ್ವ - Nerve Tissue
ನರಗಳ ಸಾಮ್ಯ - Neurotropic
ನಾಟಿಔಷಧಿ - Native Medicine
ನಿರ್ನಾಮ - Elimination
ನಿಶ್ಶಕ್ತ - Paresis
ನಿದ್ರಾಔಷಧಿ - Tranquilizer
ನಿವಾರಕ - Preventable
ನಿಶಾಚಾರ - Noctumal
ನಿಯಂತ್ರಣ - Control
ನಿಗಾವಣೆ - Observation
ನೇತ್ರದಾನ - Comeal Transplant
ಪ್ರಯೋಗಶಾಲೆ - Laboratory
ಪೌರ್ವಾತ್ಯ - Oriental
ಪೂರ್ವಪರೀಕ್ಷೆ - Test
ಬಿಸಿರಕ್ತದ ಪ್ರಾಣಿಗಳು - Warm Blooded Animals
ಬೆಳಕಿನ ಭಯ - Photophobia
ಬೆನ್ನುಹುರಿ - Spinal Cord

ಬೆನ್ನು ನೀರು - Spinal Fluid
ಮಲಬದ್ಧತೆ - Constipation
ಮನುಷ್ಯ ದಿನ - Man Days
ಮರಣಾಂತಕ - Fatal
ಮಿಣಿ ವೈದ್ಯಶಾಸ್ತ್ರಜ್ಞ - Microbiologist
ಮಿದುಳು - Brain
ಮೂಲಭಂಡಾರ - Reservoir
ಮೂಳೆ ಅನ್ನ - Bone Meal
ಮೂತ್ರ ಕೋಶ - Urinary Bladder
ಮೇಧಸ್ಸು - Serum
ಮೈಸೆಳೆತ - Spasms
ಮಾಸುಚೀಲ - Placenta
ರಕ್ತನಾಳ - Vein
ರೋಗನಿರ್ಣಯ/ರೋಗಗುರುತು - Diagnosis
ರೋಗನಿರೋಧಕ ವ್ಯವಸ್ಥೆ - Immune system
ರೋಗವಾಹಕ - Carrier of Disease
ರೋಗರಕ್ಷಣಾವಸ್ತು - Antibody
ರೋಗಲಕ್ಷಣ - Clinical Signs/Pathology
ರೋಗ ಪಕ್ವ ಸ್ಥಿತಿಯ ಕಾಲ - Incubation Period
ಲಸಿಕೆ - Vaccine
ಲಸಿಕೆದಾರರು - Vaccinees
ಲಸಿಕೆಗಾಳ - Vaccine Bait
ಲೇಪನ - Smear
ವರ್ಗೀಕರಣ - Classification
ವಿವರ ಪಟ್ಟಿ - Schedule
ವೃದ್ಧಕ - Booster
ವೃದ್ಧಿಸುವುದು - Multiplication/Replication
ವಿಶ್ವ ಆರೋಗ್ಯ ಸಂಸ್ಥೆ - World Health Organization
ವಿದ್ಯುನ್ಮಾನ ಸೂಕ್ಷ್ಮದರ್ಶಕ - Electron Microscope
ಶವಪರೀಕ್ಷೆ - Postmortem

| | | |
|---|---|---|
| ಶೀತಕ | - | Refrigerator |
| ಸರಣಿ ಮಾಲೆ | - | Serial Passage |
| ಸಣ್ಣಸೀಸೆ | - | Ampoule/Vial |
| ಸಣ್ಣಿಲಿ | - | Mouse |
| ಸತ್ವ | - | Potency |
| ಸೂಜಿ | - | Needle |
| ಸಾಂಕ್ರಾಮಿಕ | - | Communicable |
| ಸ್ನಾಯುಕೋಶ | - | Muscle Cell |
| ಸ್ನಾಯು ಖಂಡ | - | Muscle |
| ಸೆಳೆತ | - | Spasm |
| ಸ್ಥಿರಜೀವಾಣು | - | Fixed Virus |
| ಸಂರಕ್ಷಣೆ | - | Prophylaxis/Protection |
| ಸಂಸ್ಕರಿಸಿದ | - | Sterilized |
| ಸ್ವಾಧೀನ ಕಮ್ಮಿ | - | Paresis |
| ಹೊಕ್ಕಳು | - | Umbilicus |
| ಹೊಟ್ಟೆ | - | Abdomen. |



ಈ ಮಾಲೆಯ ಪುಸ್ತಕಗಳು ಪಠ್ಯಪುಸ್ತಕಗಳಲ್ಲ, ಶಾಲಾ ಕಾಲೇಜುಗಳಲ್ಲಿ ಅಧ್ಯಯನಕ್ಕೆ ಗೊತ್ತು ಮಾಡಿರುವ ಪಠ್ಯಕ್ರಮಕ್ಕೆ ಸಂಬಂಧಿಸಿದವು. ವಿದ್ಯಾರ್ಥಿಗಳು ಅಧ್ಯಯನ ಮಾಡಬೇಕಾದ ಯಾವುದಾದರೊಂದು ವಿಷಯವನ್ನು ವಿಸ್ತಾರವಾಗಿ ಶಾಸ್ತ್ರೀಯ ಅಧ್ಯಯನಕ್ಕೆ ಸರಳವಾಗಿ ನಿರೂಪಿಸುವುದು ಈ ಮಾಲಿಕೆಯ ಪುಸ್ತಕಗಳ ಗುರಿ. ಆದಷ್ಟು ಸುಲಭ ಬೆಲೆಗೆ ಈ ಪುಸ್ತಕಗಳನ್ನು ಲಭ್ಯಮಾಡಿ ಕೊಡಬೇಕೆಂದೂ ಕನ್ನಡ ಪುಸ್ತಕ ಪ್ರಾಧಿಕಾರದ ಅಪೇಕ್ಷೆ. ಕನ್ನಡ ಮಗುವಿಗೆ ಕನ್ನಡದಲ್ಲೆ ಎಲ್ಲ ತಿಳುವಳಿಕೆಯೂ ಲಭ್ಯವಾಗಬೇಕು. ಈ ಘನವಾದ ಉದ್ದೇಶದ ಸಾಧನೆಗಾಗಿ ಕನ್ನಡ ಪುಸ್ತಕ ಪ್ರಾಧಿಕಾರವು ಶ್ರಮಿಸುತ್ತದೆ.